# ಅಚಲ

ಮಾರ್ಚ್ 8, 1990, ಬೆಲೆ: ರೂ. 2-50



ಜಿಂಜಿ ಮಂಡೇಲಾ
ಅನುಪಮಾ ನಿರಂಜನ
ಎನ್. ಗಾಯತ್ರಿದೇವಿ
. ವೆಂಕಟಸುಬ್ಬಯ್ಯ
. ಜಿ. ರಾಮಕೃಷ್ಣ

ಲಂ ವೆಂಘ
ಸೀಮಂತಿನಿ ನಿರಂಜನ
ಭಾಗ್ಯ ಜಯಸುದರ್ಶನ
ವಿಜಯಾ ದಬ್ಬೆ
ಸಂಪಿಗೆ ಪುಷ್ಪ
ರಂಜಾನ್ ದರ್ಗಾ

ಸಂಪುಟ ೬ ಸಂಚಿಕೆ ೧

'ಅಚಲ' ಪತ್ರಿಕೆಯನ್ನು ಪಡೆಯಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹತ್ತು ರೂಪಾಯಿಗಳನ್ನು ಎಂ.ಓ./ಡ್ರಾಫ್ಟ್ ಮೂಲಕ ಕಳುಹಿಸಿ.
ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೇ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
26, 1ನೇ ಮೇನ್, ವೈಯಾಳಿಕಾವಲ್
ಬೆಂಗಳೂರು–560 003.

---

ಈ ಸಂಚಿಕೆಯಿಂದ 'ಅಚಲ'ದ ಹೊಸ ವರ್ಷ ಆರಂಭ. ನೀವು ನಿಮ್ಮ ಚಂದಾವನ್ನು ನವೀಕರಿಸದಿದ್ದರೆ, ದಯವಿಟ್ಟು ಕೂಡಲೇ ನವೀಕರಿಸಿ ಪ್ರೋತ್ಸಾಹಿಸಿ. ಕಳೆದ ಐದು ವರ್ಷಗಳಿಂದ ಪತ್ರಿಕೆಯನ್ನು ಉಳಿಸಿ, ಬೆಳೆಸುತ್ತಿರುವ ಸದಭಿರುಚಿಯ ಜನರು ಈಗಲೂ ಅದೇ ಅಭಿಮಾನದಿಂದ ಚಂದಾದಾರರಾಗುವರೆಂದು ನಿರೀಕ್ಷಿಸುತ್ತೇವೆ.

---



---

ಚಂದಾ ವಿವರ

| | | | |
|---|---|---|---|
| ವಾರ್ಷಿಕ ಚಂದಾ | : | ರೂ | 10–00 |
| ಬಿಡಿ ಪ್ರತಿ | : | ರೂ | 1–50 |
| ವಿಶೇಷ ಪ್ರತಿ | : | ರೂ | 2–00 |
| ಆಜೀವ ಚಂದಾ | : | ರೂ | 100–00 |

Printed at PRINTSWELL, 78, 2nd Main Road Nagappa Block, Srirampuram, Bangalore-21 & Published by Dr. G. Ramakrishna on behalf of Jagruthi Mahila Adhyayana Kendra
26, I Main, Vyalikaval, Bangalore-560 003.
Editor : N. GAYATRI

ಪುಸ್ತಕ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕಾಗಿ ವಿನಂತಿ.

**Statement about Ownership and other particulars about Newspaper ACHALA**

FORM IV (See Rule 8)

1. Place of Publication : Bangalore Karnataka State
2. Periodicity of its Publication : Bi-Monthly
3. Printers Name : Dr. G. Ramakrishna for Printswell Bangalore
   Nationality : Indian
   Address : 26, I Main Road Vyalikaval, Bangalore-3
4. Publisher's Name : Dr. G. Ramakrishna for Jagtuthi Mahila Adhyana Kendra Bangalore
   Nationality : Indian
   Address : 26, I Main Road Vyalikaval, Bangalore-3
5. Editor's Name : N. Gayathri
   Nationality : Indinn
   Address : 26, I Main Road Vyalikaval Bangalore-3
6. Name & Address of individuals who own the Newspaper : Dr. G. Ramakrishna 26, I Main Road Vyalikaval Bangalore-560 003

I, Dr. G. Ramakrishna, here by declare that the particulars given above are true to the best of my knowledge and belief.

Bangalore
Date : 1-3-1990

Sd/–
Dr. G. Ramakrishna

# ಅಚಲಾಗೆ ಐದು

ಐದು ವರ್ಷಗಳ ಹಿಂದಿನ ಮಾತು. ನಾವು ಕೆಲವು ಗೆಳತಿಯರು ಕೂಡಿ ಮಹಿಳಾ ಪತ್ರಿಕೆಯೊಂದನ್ನು ತರುವ ವಿಚಾರ ಚರ್ಚಿಸುತ್ತಿದ್ದೆವು. ಆವರೆಗೆ ಮಹಿಳಾ ಚಳುವಳಿಯೊಂದಿಗೆ ನಮಗಿದ್ದ ಸಂಪರ್ಕ, ಅನುಭವದಿಂದ ಮಹಿಳಾ ಚಳುವಳಿಗೆ ನೆರವಾಗಬಲ್ಲಂತಹ, ಪತ್ರಿಕೆಯನ್ನು ತರುವ ಉದ್ದೇಶ ನಮ್ಮಲ್ಲಿ ಮೂಡಿತ್ತು. ಆಗ ರೂಪುಗೊಂಡದ್ದು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ. ಮಹಿಳಾ ಅಧ್ಯಯನ ಮತ್ತು ಜಾಗೃತಿ ಈ ಕೇಂದ್ರದ ಹಾಗು ಪತ್ರಿಕೆಯ ಮುಖ್ಯ ಉದ್ದೇಶ.

1985ರ ಮಾರ್ಚ್ 10ರಂದು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದಿಂದ ಸಂಗಾತಿ ಎಂಬ ಹೆಸರಿನಲ್ಲಿ ದ್ವೈಮಾಸಿಕ ಪತ್ರಿಕೆ ಬಿಡುಗಡೆಯಾಯಿತು. ಬಿಡುಗಡೆ ಮಾಡಿದ ಶ್ರೀಮತಿ ವಿಜಯಾ ದಬ್ಬೆಯವರು ಅನಂತರವೂ ಪತ್ರಿಕೆಯ ಬೆಳವಣಿಗೆಗೆ ತುಂಬಾ ಸಹಕರಿಸಿದ್ದಾರೆ. ನಂತರ ತಾಂತ್ರಿಕ ಕಾರಣಗಳಿಗಾಗಿ ಪ್ರಿಯ ಸಂಗಾತಿಯೆಂಬ ಹೆಸರು ಹೊತ್ತು ಐದು ಸಂಚಿಕೆಗಳು ಬಂದವು. ಕಡೆಗೆ ಈ ಪತ್ರಿಕೆಗೆ ಸಿಕ್ಕ ಅಧಿಕೃತ ನಾಮಧೇಯ ಅಚಲ. 1986ರ ಮಾರ್ಚ್ 8ರಂದು ಈ ಪತ್ರಿಕೆ ಅಚಲ ಎಂಬ ನೂತನ ನಾಮಧೇಯ ಹೊತ್ತು ಪ್ರಕಟವಾದಾಗ ಅದನ್ನು ಸಮಾರಂಭವೊಂದರಲ್ಲಿ ಬಿಡುಗಡೆ ಮಾಡಿದ ಶ್ರೀಮತಿ ಅನುಪಮಾ ನಿರಂಜನ ಯಾವಾಗಲೂ ಪತ್ರಿಕೆಯ ಜೊತೆಗೆ ತಮ್ಮ ಸಂಬಂಧವಿರಿಸಿಕೊಂಡು ಅದರ ಶುಭ ಕೋರಿದ್ದಾರೆ; ಪ್ರೋತ್ಸಾಹಿಸಿದ್ದಾರೆ.

ಈ ಐದು ವರ್ಷಗಳ ಅವಧಿಯಲ್ಲಿ ಈ ಪತ್ರಿಕೆ ಒಮ್ಮೆಯೂ ಕುಂಟದೆ ಯಶಸ್ವಿಯಾಗಿ ನಡೆದುಕೊಂಡು ಬಂದಿದೆ. ಇದರ ಯಶಸ್ಸಿಗೆ ಹಲವಾರು ಸಾಹಿತಿಗಳು, ವಿಚಾರವಂತರು, ಕಲಾವಿದರು ಸಹಕಾರ ನೀಡಿದ್ದಾರೆ. ಪತ್ರಿಕೆಯ ಐದು ವರ್ಷಗಳ ಅವಧಿಯಲ್ಲಿ ಪತ್ರಿಕೆಗೆ ಮುಖಚಿತ್ರ ಹಾಗೂ ಹಲವಾರು ರೇಖಾಚಿತ್ರಗಳನ್ನು ರಚಿಸಿಕೊಟ್ಟು ಸಹಕರಿಸಿರುವ ಶ್ರೀಮತಿ ಧನಲಕ್ಷ್ಮಿ, ಕಮಲೇಶ್, ಚಂದ್ರನಾಥ್, ಎಂ. ಟಿ. ವಿ. ಆಚಾರ್ಯ, ವೆಂಕಟಾಚಲಪತಿ ಹಾಗೂ ಗುಜ್ಜಾರಪ್ಪ ಮತ್ತು ಸನತ್‌ಕುಮಾರ್ ರವರಿಗೆ ಪತ್ರಿಕೆ ಕೃತಜ್ಞವಾಗಿದೆ. ಪತ್ರಿಕೆಗೆ ಲೇಖನಗಳನ್ನು ಬರೆದುಕೊಟ್ಟು ಸಹಕರಿಸಿರುವ ಶ್ರೀಮತಿಯವರಾದ ಅನುಪಮಾ ನಿರಂಜನ, ಸಾರಾ ಅಬೂಬಕ್ಕರ್, ವಿಜಯಾ, ವಿಜಯಾ ದಬ್ಬೆ, ಸುಮಿತ್ರಾಬಾಯಿ, ಮಾಲತಿ, ಎಸ್. ವಿಜಯಶ್ರೀ, ಗೀತಾ ಪಿ. ಎಸ್, ಹೇಮಲತಾ ಮಹಿಷಿ, ಬಿ. ಜೆ. ಸುವರ್ಣ, ಸುಶೀಲಾ, ಶಾಂತಾ ನಾಗರಾಜ್—ಹಾಗೂ ಇನ್ನೂ ಮುಂತಾದ ಅನೇಕ ಮಹಿಳೆಯರಿಗೂ, ಗುರುದತ್, ಶ್ರೀನಿವಾಸರಾವ್, ಕೆ. ಮರುಳಸಿದ್ದಪ್ಪ, ಜಿ. ರಾಮಕೃಷ್ಣ, ರಂಜಾನ್ ದರ್ಗಾ, ಬರಗೂರು ರಾಮಚಂದ್ರಪ್ಪ, ಗುಡಿಹಳ್ಳಿ ನಾಗರಾಜ್, ಜಿ. ಎನ್. ಮೋಹನ್, ಕೆ. ಸತ್ಯನಾರಾಯಣ ಎಸ್. ರಘುನಂದನ್—ಇನ್ನು ಮುಂತಾದ ಅನೇಕ ಮಹನೀಯರಿಗೂ ಪತ್ರಿಕೆ ಕೃತಜ್ಞವಾಗಿದೆ. ಇಲ್ಲಿ ಬಿಟ್ಟು ಹೋಗಿರುವ ಇನ್ನೂ ಅನೇಕ ಬರಹಗಾರರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ವಿಚಾರ ಸಂಕಿರಣ : ಪತ್ರಿಕೆಯ ಜೊತೆ ಜೊತೆಯಲ್ಲಿ ಮಹಿಳಾ ಜಾಗೃತಿಗೆ ಕಾರಣವಾಗ ಬಹುದಾದ ಹಲವಾರು ಕಾರ್ಯಕ್ರಮಗಳನ್ನು ಕೇಂದ್ರ ಕೈಗೊಂಡಿದೆ. ನಮ್ಮ ಅಧ್ಯಯನ ಕೇಂದ್ರವು ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಸಹಯೋಗದೊಂದಿಗೆ 'ಮಹಿಳಾ ಪ್ರಗತಿ' ವಿಚಾರ

ಸಂಕಿರಣವನ್ನು ಎರಡು ದಿನಗಳ ಕಾಲ ನಡೆಸಿತು. ಹಾಗೆಯೇ ಸಮಾಜವಾದಿ ಅಧ್ಯಯನ ಕೇಂದ್ರದ ಸಹಯೋಗದೊಂದಿಗೆ 'ಪ್ರಗತಿಯತ್ತ ಮಹಿಳೆ' ವಿಚಾರ ಸಂಕಿರಣವನ್ನು ನಡೆಸಲಾಯಿತು. 'ಟ್ರೇಡ್ ಯೂನಿಯನ್ ಮತ್ತು ಮಹಿಳೆ' ಕುರಿತ ವಿಚಾರ ಸಂಕಿರಣವನ್ನು ಕೇಂದ್ರವು ಏರ್ಪಡಿಸಿತ್ತು. ತ್ರಿವೇಣಿಯವರು ಗತಿಸಿ ಇಪ್ಪತ್ತೈದು ವರ್ಷಗಳ ನಂತರ ಅವರ ನೆನಪಿಗೆಂದು ವಿಚಾರ ಸಂಕಿರಣವನ್ನು ನಡೆಸಿತು. ಹಾಗೆಯೇ ಅವರ ಕೃತಿಗಳನ್ನು ಕುರಿತ ವಿಮರ್ಶಾ ಗ್ರಂಥವನ್ನು ಪ್ರಕಟಿಸುವುದರ ಮೂಲಕ ಜಾಗೃತಿ ಪ್ರಕಾಶನವನ್ನು ಆರಂಭಿಸಿತು, ಡಾ|| ವಿಜಯಾ ದಬ್ಬೆಯವರ ಪುಸ್ತಕ 'ಮಹಿಳೆ, ಸಾಹಿತ್ಯ, ಸಮಾಜ'ದ ಬಿಡುಗಡೆಯ ಕಾರ್ಯಕ್ರಮ ಮತ್ತು ಮಹಿಳಾ ಸಾಹಿತ್ಯವನ್ನು ಕುರಿತು ಸಂವಾದವನ್ನು ಏರ್ಪಡಿಸಲಾಗಿತ್ತು.

ತಿಂಗಳ ಭಾಷಣ ಕಾರ್ಯಕ್ರಮ : ತಿಂಗಳಿಗೊಂದು ಭಾಷಣ ನಡೆಸುವ ಕಾರ್ಯಕ್ರಮದ ಯೋಜನೆಯನ್ನು ಕೇಂದ್ರವು ಹಮ್ಮಿಕೊಂಡಿದ್ದು ಇದರ ಉದ್ಘಾಟನೆಯನ್ನು ಶ್ರೀಮತಿ ಅನುಪಮಾ ನಿರಂಜನ ತಮ್ಮ ಭಾಷಣದ ಮೂಲಕ ಆರಂಭಿಸಿದರು. ಈ ಕಾರ್ಯಕ್ರಮಗಳಲ್ಲಿ ಮಹಿಳಾ ನಾಯಕಿಯಾದ ರೇಣು ಚಕ್ರವರ್ತಿ ಯಂತಹವರಿಂದ ಹಿಡಿದು ಹೇಮಲತಾ ಮಹಿಷಿ, ಪಿ. ಎಸ್. ಗೀತ, ಜಿ. ರಾಮಕೃಷ್ಣ, ಸಿ. ವಿ. ಆನಂದ ಇನ್ನೂ ಮುಂತಾದವರು ಭಾಗವಹಿಸಿದ್ದಾರೆ.

ಪ್ರತಿಭಟನಾ ಕಾರ್ಯಕ್ರಮ : ನಮ್ಮ ಸಮಾಜದಲ್ಲಿ ಇರುವ ವೈಷಮ್ಯಗಳಿಗೆ ಮತ್ತು ಆಗಿಂದಾಗ ಉದ್ಭವಿಸುವ ಸಾಮಾಜಿಕ ಸಮಸ್ಯೆಗಳಿಗೆ ಪ್ರತಿಸ್ಪಂದಿಸುವ ನೈತಿಕ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ಕೇಂದ್ರ ತನ್ನ ಮಿತಿಯಲ್ಲಿ ಕಾರ್ಯ ಪ್ರವೃತ್ತವಾಗಿದೆ. ಕುದುರೆ ಮೋತಿ ಪ್ರಕರಣವನ್ನು ಪ್ರತಿಭಟಿಸಿ ಉಳಿದ ಪ್ರಗತಿಪರ ಸಂಘಟನೆಗಳೊಡನೆ ಪ್ರತಿಭಟನಾ ಸಭೆ ಮತ್ತು ಮೆರವಣಿಗೆಯಲ್ಲಿ ಕೇಂದ್ರ ಭಾಗವಹಿಸಿತ್ತು. ಸತಿ ಪದ್ಧತಿಯನ್ನು ಬೆಂಬಲಿಸಿದ ಶಂಕರಾಚಾರ್ಯ ಮಠಾಧಿಪತಿಗಳ ವಿರುದ್ಧ, ಬೆಂಡಿಗೇರಿ ಪ್ರಕರಣದ ವಿರುದ್ಧ, ರಾಮಜನ್ಮ ಭೂಮಿ ವಿವಾದದ ಪ್ರಕರಣದ ವಿರುದ್ಧ ನಡೆದ ಧರಣಿ ಕಾರ್ಯಕ್ರಮದಲ್ಲಿ ಕೇಂದ್ರ ಭಾಗವಹಿಸಿದೆ.

ಇತ್ತೀಚೆಗಷ್ಟೇ ಆರಂಭವಾಗಿರುವ ಜಾಗೃತಿ ಬಳಕೆದಾರರ ವೇದಿಕೆಯು ಬಳಕೆದಾರರ ಸಮಸ್ಯೆಗಳತ್ತ ತನ್ನ ಕಾರ್ಯವನ್ನು ವಿಸ್ತರಿಸುವ ಪ್ರಯತ್ನ ಮಾಡುತ್ತಿದೆ. ವರದಕ್ಷಿಣೆ, ವಿಷಮ ವಿವಾಹದ ಸಮಸ್ಯೆಗಳು ಮುಂತಾದವುಗಳಿಂದ ನೊಂದ ಹೆಣ್ಣು ಮಕ್ಕಳ ಪ್ರಕರಣಗಳಲ್ಲಿ ನೈತಿಕ ಬೆಂಬಲ ಸೂಚಿಸುವ ಮತ್ತು ಕಾನೂನಿನ ನೆರವು ದೊರಕಿಸುವ ಪ್ರಯತ್ನಗಳನ್ನು ಕೇಂದ್ರ ಸಹಕರಿಸಿದೆ.

ಅಂತರರಾಷ್ಟ್ರೀಯ ಮಹಿಳಾ ದಿನದ ಅಂಗವಾಗಿ ಕವಿಗೋಷ್ಠಿ, ಹಾಡು, ನಾಟಕ, ಪುಸ್ತಕ ಪ್ರದರ್ಶನ, ಪ್ರಬಂಧ ಸ್ಪರ್ಧೆ, ಕವನ ಸ್ಪರ್ಧೆ, ಚರ್ಚಾಸ್ಪರ್ಧೆಗಳನ್ನು ನಡೆಸುತ್ತಾ ಬಂದಿದೆ.

ಇಂದಿನ ಕಲುಷಿತ ರಾಜಕೀಯ, ಸಾಮಾಜಿಕ ಪರಿಸ್ಥಿತಿಯಲ್ಲಿ ಕ್ಷೀಣವಾದ ಮಹಿಳಾ ಧ್ವನಿಯನ್ನು ಗುರುತಿಸುವ, ಬಲಪಡಿಸುವ ಉದ್ದೇಶ ಹೊತ್ತು ಬಂದ ಅಚಲ ಮತ್ತು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಸಾಧಿಸಿರುವುದು ಅಲ್ಪವಾದರೂ ತನ್ನ ಮುಂದೆ ಹಲವಾರು ಸವಾಲುಗಳನ್ನು ಎದುರಿಸುವ ಸಂಕಲ್ಪ ಹೊತ್ತು ನಿಂತಿದೆ.

—ಎಸ್. ಗಾಯತ್ರಿ

## ಕವನ

# ಅಂಗೈಯಲ್ಲಿ ಸಂಜೀವಿನಿ

ಮೇಲೆ ಪರ್ವತದಲ್ಲಿ
ಸಂಜೀವಿನೀಸ್ತೋಮ
ಹತ್ತಿ ತರಬಲ್ಲ ಹನುಮಂತರಿಲ್ಲ

ಅಲ್ಲಿ ದೂರದಲ್ಲಿ
ಸತ್ತವರನೆತ್ತುವ
ಲೋಕ ಪಾವನಿ ಗಂಗೆ
ಹೊತ್ತು ತರಬಲ್ಲ ಭಗೀರಥರಿಲ್ಲ.

ಮಡಿಲಲ್ಲಿ ದಿಕ್ಕೆಟ್ಟು ಕೈ ಚಾಚಿ
ಮೈ ಹತ್ತಿ ಧಾವಂತ ಓಡುತ್ತ
ನನ್ನತ್ತ ಬಂದ ಮಗಳು

ನಮ್ಮೂರ ಗುಡ್ಡವನೂ
ಹತ್ತಲಾರದ ಕಾಲುಗಳ
ಕಣ್ಣ ಗಂಗೆಯ ಮಾತ್ರ
ಹರಿಸಬಲ್ಲ ನಾನು
ಬರಿ ಬೆಂಕಿಯ ಹುಳು

ಸಂಜೀವಿನಿಯಿಲ್ಲದ ಕೈಯಲ್ಲಿ
ಮಗಳ ಮೈ ದಡವುತ್ತ

ಮನ ಹಿಂಡಿ ಬಂದ ನೆತ್ತರಂಥ
ಜೀವಗಂಗೆಯಿಲ್ಲದ ಕಣ್ಣನೀರಿಂದ
ಅವಳ ತೋಯಿಸುತ್ತ

ಕಾಯುತ್ತಿದ್ದೆ ನಮ್ಮ ಕೊನೆಗೆ
ಬರುತ್ತಿದ್ದುದೇ ಕೊನೆಯೆಂದು ಬಗೆದೆ
ಬರುವ ಕತ್ತಲೆಗೆ
ಹದಮಾಡಲು ಕಣ್ಣ ಮುಚ್ಚಿದರೆ
ಎಳೆಯ ಸೂರ್ಯನ ಹಿತ ಕಣ್ಣ ಮುತ್ತ ಬೇಕೆ ?
ಸೂರ್ಯಜ್ಞನ ಕೊನೆಗೆರೆಯೆಂದು ಬಗೆದದ್ದು
ಬಾಲಸೂರ್ಯನ ಮೊದಲ ಗೆರೆಯಾಯಿತು
ಸಾವು ಮೈನೆಕ್ಕಿ ಹೋದ ಮಗಳು
ಒಲವ ಕಣ್ಣಲ್ಲಿ ತುಂಬಿ ಹೇಳುತ್ತಿದ್ದಾಳೆ :
ಆಸರೆಯಾಗುವ ಕೈಗಳಲ್ಲಿ
ತಿರುವುದಾ ಮೊಗದಲ್ಲಿ
ಮೈ ದಡವುವೊಂದು ಕ್ಷಣದಲ್ಲಿ
ಇರುವ ಸಂಜೀವಿನಿ–ಗಂಗೆ ಅಕ್ಷಯಿ

ಪರೀಕ್ಷೆ ಬೆಂಕಿಯಿಂದೆದ್ದು ಬಂದ ಸೀತೆಗೆ
ತಾಯಿ ಮಡಲಿನ ಜೋಗುಳ

—ವಿಜಯಾದಬ್ಬೆ

## ಮೇನಕೆಯ ಮುಖವಾಡ

ಈಗ ಹುಟ್ಟಿದ ಕೊನೆಯ
    ಮಗುವೇ
ಕೇಳದಿರು ಕಂದಾ
ಇದು ತರವೆ ಎಂದು
ನಾನು ಮಾತೆಯಲ್ಲವೆಂದು
    ಹೇಳದಿರು

ಮಗುವೇ
ಎಳೆಯ ಮಾವಿನ ಚಿಗುರೇ
ಬೆಳದಿಂಗಳ ಚೆಲುವೇ
ಹೊನ್ನಗೆಯ ಹೂವೇ
ಕನಸು ತುಂಬಿದ ಕುಡಿಯೇ
ನಾನು ಕಂಡುದುದೆಲ್ಲಾ ನಿನ್ನ ಮುಂದೆಯೆ ?

ಭೋಗವೇ ಯೋಗವೇ
ರಸವೇ ರೂಪವೇ
ಗಂಧವೇ ಒಲವೇ ಚಲುವೆ
ಇಂದ್ರನೆ ದೇವೇಂದ್ರನೆ
    ಮನ್ಮಥನೆ
ಇದೆಲ್ಲಾ ಕೈಗೆ ಎಟುಕಿಬಿಟ್ಟಿತು ಕಂದಾ
ಯಥೇಚ್ಛವಾಗಿ ತುಚ್ಛವಾಗಿ ನಿಕೃಷ್ಟವಾಗಿ

ಆದರೆ
    ಆಲಿಸುವ ಆಲಂಗಿಸುವ
    ನುಡಿಸುವ ನೇವರಿಸುವ
    ನಲಿಸುವ ನಗಿಸುವ
    ಕನಸು

ಎಷ್ಟು ತುಟ್ಟಿಯಾಯಿತು ಕಂದಾ
ಕರುಳಿರುವ ತನಕ ನಾನು ನಿಂತೆನೆ
        ಹೀಗೆ ಹೊರಗೆ

ಕೈಂಕರ್ಯವೊಂದನೇ
ತಿಳಿದು ಬಂದವಳು ನಾನು

ಮಣ್ಣು ಮುಟ್ಟಿದೆನು ಮಗುವೇ
ಬೇರೆಯಾದೆನು ನಾನು
ಬಿನ್ನಹಕೆ ಬಾಯಿಲ್ಲವೆಂದರಿತೆನು
ಇಲ್ಲಿ ಪಡೆದುದನು
ಇಲ್ಲಿಯೇ ಬಿಟ್ಟು ಹೊರಡಬೇಕೆ ?
ಹೃದಯಶೂನ್ಯ ಮಾತೆ
ಹೊತ್ತು ಶೂನ್ಯ ಹೃದಯವನು
ಕ್ಷಮೆಯ ಹಕ್ಕಿಲ್ಲದಂತೆ
ಆದರೂ ಇದೋ ಕ್ಷಮಿಸು ಎಂದೆ

—ಭಾಗ್ಯ ಜಯಸುದರ್ಶನ

## ಕಾಂಡ ನನ್ನ ತಂದೆ

ಕಡಿದುರುಳಿಸಲಾಯಿತು
ಮರವನ್ನು,
ಚೆಲ್ಲಾಪಿಲ್ಲಿಯಾದವು
ಫಲಗಳೆಲ್ಲ

ನಾ ಕಣ್ಣೀರಿಟ್ಟೆ
ನನ್ನ ಮನೆ ಮಂದಿಯನ್ನೆಲ್ಲ
ಕಳಕೊಂಡ ಕಾರಣ.

ಕಾಂಡ ನನ್ನ ತಂದೆ
ರೆಂಬೆ–ಕೊಂಬೆಗಳೆಲ್ಲ
ಅವನ ಬೆಂಬಲಕ್ಕೆ.

ಹಣ್ಣುಗಳು : ಹೆಂಡತಿ–ಮಕ್ಕಳು
ಅದೆಲ್ಲ ಅವನಿಗೆ ಎಷ್ಟೊಂದು ರುಚಿಕರ!

ಪ್ರೀತಿಗೆ ಪಾತ್ರವಾದ ಅವೆಲ್ಲ
ಕೆಳಗೆ ಬಿದ್ದವು.

ಭೂಮಿಯಲ್ಲಿನ ಕೆಲವು
ಆತನ ಕೈಗೆಟುಕಲಿಲ್ಲ
ಬೇರುಗಳನ್ನು, ಸಂತೋಷಗಳನ್ನು
ಕಸಿಯಲಾಯಿತು ಅವನಿಂದ

—ಜಿಂಜಿ ಮಂಡೇಲಾ

ಅನು : ದರ್ಗಾ

ದಕ್ಷಿಣ ಆಫ್ರಿಕಾದಲ್ಲಿ ಜೀವಾವಧಿ ಶಿಕ್ಷೆ ಎಂದರೆ ಜೀವ ಇರುವ ವರೆಗೂ ಶಿಕ್ಷೆ ಎಂದು ಅರ್ಥ. ಮಕ್ಕಳು 16 ವರ್ಷ ವಯಸ್ಸಾಗುವವರೆಗೆ ಬಂಧನದಲ್ಲಿ ಇರುವವರನ್ನು ಕಾಣಲು ಅವಕಾಶವಿಲ್ಲ.

ನೆಲ್ಸನ್ ಮಂಡೇಲಾ ಅವರ ಮಕ್ಕಳಲ್ಲೊಬ್ಬಳಾದ ಜಿಂಜಿಗೆ ಕೂಡ 16 ವರ್ಷ ವಯಸ್ಸಾಗುವವರೆಗೆ ತಂದೆಯನ್ನು ನೋಡುವ ಅವಕಾಶ ಸಿಗಲಿಲ್ಲ.

ಆಕೆ ಶಾಲಾ ಬಾಲಕಿಯಾಗಿದ್ದಾಗ ತನ್ನ ದುಃಖವನ್ನು ಕವನಗಳ ಮೂಲಕ ತೋಡಿಕೊಳ್ಳತೊಡಗಿದಳು. ಎಲ್ಲ ವಿಧದಲ್ಲೂ ಅನಿಶ್ಚಿತವಾಗಿರುವ ಪರಿಸ್ಥಿತಿಯಲ್ಲಿ ಬರೆದ ಆ ಕವನಗಳನ್ನು ಕಸದ ಬುಟ್ಟಿಯಲ್ಲಿ ಎಸೆಯುತ್ತಿದ್ದಳು. ಇದನ್ನು ಗಮನಿಸಿದ ತಾಯಿ ವಿನ್ನಿ ಮಂಡೆಲಾ ಆಕೆಯ ಕವನಗಳನ್ನು ಸಂಗ್ರಹಿಸಿದರು. ಆ ಸಂಗ್ರಹ 1978ರಲ್ಲಿ 'Black As I am' ಕವನ ಸಂಕಲನವಾಗಿ ಹೊರಬಂತು. ಸಂಕಲನದ ಈ ಮೊದಲ ಕವನ ತಂದೆ ನೆಲ್ಸನ್ ಮಂಡೇಲಾ ಅವರನ್ನು ಕುರಿತದ್ದಾಗಿದೆ.

ಸಾಹಿತ್ಯದ 'ಶ್ರೇಷ್ಠ'ಗಳ ಕಣ್ಣಲ್ಲಿ ಇದೊಂದು ಕಸದ ಬುಟ್ಟಿಯ ಕವನವಾಗಿಯೇ ಕಾಣಬಹುದು. ಆದರೆ ಈ ಕವನ ಬದುಕಿಗೆ ರೆಲೆವೆಂಟ್ ಆಗಿರುವುದರಿಂದ ಹೋರಾಟದಲ್ಲಿ ನಂಬಿಕೆ ಇರುವವರಿಗೆ ಮಹತ್ವದ್ದಾಗಿದೆ. ಕ್ರಾಂತಿಕಾರಿಯೊಬ್ಬನ ಮನೆಯವರ ಮನಸ್ಸಿನ ಚಿತ್ರ ಇದಾಗಿದೆ.

'ಭೂಮಿಯಲ್ಲಿನ ಕೆಲವು
ಆತನ ಕೈಗೆಟುಕಲಿಲ್ಲ' ಎಂಬ ಸಾಲು ನೆಲ್ಸನ್ ಮಂಡೇಲಾ ಜೈಲಿನಲ್ಲಿ ಇದ್ದಾಗ ಕ್ರೂರ ಕಾಯ್ದೆಯಿಂದಾಗಿ ಮಕ್ಕಳನ್ನು ನೋಡಲಾಗಲಿಲ್ಲ ಎಂಬುದನ್ನು ಧ್ವನಿಸುತ್ತದೆ.

ಈ 'ಕಸದ ಬುಟ್ಟಿ'ಯ ಕವನಗಳ ಸಂಕಲನ 'Black As I am' ಗೆ ಸಾವಿರ ಡಾಲರ್‌ಗಳ ಬಹುಮಾನ ಬಂತು. ನಿಸ್ವಾರ್ಥತೆ ಮತ್ತು ಮಾನವ ಘನತೆಗೆ ಉದಾಹರಣೆಯಾಗುವಂಥ ಮಕ್ಕಳ ಪುಸ್ತಕಕ್ಕೆ ಸಿಗುವ ಈ ಪ್ರಶಸ್ತಿಗೆ ಜನುಸ್ಜ಼ ಕೊರ್‌ಜಾಕ್ ಪ್ರಶಸ್ತಿ ಎಂದು ಹೆಸರು.

ಆದರೆ ದಕ್ಷಿಣ ಆಫ್ರಿಕಾದ ವರ್ಣಭೇದ ನೀತಿಯ ಸರ್ಕಾರ ಜಿಂಜಿಗೆ ನ್ಯೂಯಾರ್ಕ್‌ಗೆ ಹೋಗಲು ಅನುಮತಿ ನೀಡಲಿಲ್ಲ.



# ವರ್ಜೀನಿಯಾ ವೂಲ್ಫಳ "A room of one's own" ಪುಸ್ತಕದ ಬಗ್ಗೆ

● ಅನುಪಮಾ ನಿರಂಜನ

ಈ ಶತಮಾನದ ಮಹತ್ವದ ಲೇಖಕರಲ್ಲಿ ಒಬ್ಬಳು ವರ್ಜೀನಿಯಾ ವೂಲ್ಫ್. ಈಕೆ ಕತೆ, ಕಾದಂಬರಿ, ವಿಮರ್ಶೆ ಲೇಖನ ಮುಂತಾಗಿ ವೈವಿಧ್ಯಮಯ ಸಾಹಿತ್ಯ ರಚಿಸಿದ್ದಾಳೆ. ಆದರೆ ಅವಳಿಂದು ನಮಗೆ ಮುಖ್ಯವಾಗುವುದು 'ಮಹಿಳೆ ಮತ್ತು ಬರೆವಣಿಗೆ' ಬಗ್ಗೆ ಆಕೆ ಬರೆದ ವಿಶೇಷ ಲೇಖನ ಗಳಿಗಾಗಿ. A room of ones own (1929 ರಲ್ಲಿ ಪ್ರಕಟಿತ) ಅಂಥ ಲೇಖನಗಳ ಸಂಗ್ರಹ, ವೂಲ್ಫ್ ಪ್ರಸ್ತುತ ಪಡಿಸಿದ ಎರಡು ಪ್ರಬಂಧಗಳ ಆಧಾರದ ಮೇಲೆ, ಈ ಇಡೀ ಹೊತ್ತಿಗೆ ಸೃಷ್ಟಿಯಾಗಿದೆ.

ಇದು ಪ್ರಖರ ಸ್ತ್ರೀ ಪ್ರಜ್ಞೆ ಇರುವ ಕೃತಿ. ಮಹಿಳೆ ಯರು ಮತ್ತು ಸಾಹಿತ್ಯದ ಜೊತೆಗಿನ ಸಂಬಂಧ ವಿಶ್ಲೇಷಿಸುತ್ತಾ, ಸಮಾಜದಲ್ಲಿ ಅವರ ಸ್ಥಿತಿಗತಿಗಳು, ಅದಕ್ಕೆ ಕಾರಣವಾದ ಆರ್ಥಿಕ ಅವಲಂಬನೆ, ಅದನ್ನು ಗೆದ್ದುಕೊಂಡು ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಆದ ಛಾಪು ಹೊಡೆಯಲು ಅವಳು ಮಾಡಿಕೊಳ್ಳಬೇಕಾದ ಸಿದ್ಧತೆಗಳು —ಇವುಗಳ ಬಗ್ಗೆ ವರ್ಜೀನಿಯಾ ವೂಲ್ಫ್ ಈ ಕೃತಿಯಲ್ಲಿ ವಿಸ್ತೃತವಾಗಿ ಚರ್ಚಿಸಿದ್ದಾಳೆ. ಆಂಗ್ಲ ಸಾಹಿತ್ಯದ ಆರಂಭಿಕ ಬರಹಗಾರರು (ಮೇರಿ ವೂಲ್ಫ್ ಸ್ಟೋನ್ ಕ್ರಾಫ್ಟ್, ಜಾನ್ ಸ್ಟೂವರ್ಟ್ ಮಿಲ್) ಮಹಿಳೆಗೆ ರಾಜಕೀಯ ಸ್ವಾತಂತ್ರ್ಯ ತಂದುಕೊಡಲು ಶ್ರಮಿಸಿದರೆ, ವರ್ಜಿನಿಯಾ ವೂಲ್ಫ್ ಅವರು ಬೌದ್ಧಿಕ ಸ್ವಾತಂತ್ರ್ಯ ಗಳಿಸುವಲ್ಲಿ ನೆರವಾದಳು ಎನ್ನಬಹುದು.

ಇಂದು ಜಗತ್ತಿನಾದ್ಯಂತ ಸ್ತ್ರೀವಾದಿ ವಿಮರ್ಶಕರು ಈ ಪುಸ್ತಕದ ಬಗ್ಗೆ ಮಾತಾಡುತ್ತಿದ್ದಾರೆ. ಆದರೆ ಆ ಪುಸ್ತಕ

ಆಂಗ್ಲ ಸಾಹಿತ್ಯದ ಆರಂಭಿಕ ಬರಹಗಾರರು (ಮೇರಿ ವೂಲ್ಫ್ ಸ್ಟೋನ್ ಕ್ರಾಫ್ಟ್, ಜಾನ್ ಸ್ಟೂವರ್ಟ್ ಮಿಲ್) ಮಹಿಳೆಗೆ ರಾಜಕೀಯ ಸ್ವಾತಂತ್ರ್ಯ ತಂದುಕೊಡಲು ಶ್ರಮಿಸಿದರೆ, ವರ್ಜಿನಿಯಾ ವೂಲ್ಫ್ ಅವರು ಬೌದ್ಧಿಕ ಸ್ವಾತಂತ್ರ್ಯ ಗಳಿಸುವಲ್ಲಿ ನೆರವಾದಳು ಎನ್ನಬಹುದು.

ಪ್ರಕಟವಾದಾಗ ಸ್ವತಃ ವರ್ಜಿನಿಯಾ ವೂಲ್ಫಳಿಗೇ ವಿಮರ್ಶ ಕರು ಅದರ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುವ ಬಗ್ಗೆ ಸಂದೇಹವಿತ್ತು. ಅವಳು ಆಗ ತನ್ನ ದಿನಚರಿಯಲ್ಲಿ (1929) ಹೀಗೆ ಬರೆದಳು :

"ಇ. ಎಂ. ಫಾರ್‌ಸ್ಟರ್ ಈ ಪುಸ್ತಕವನ್ನು ವಿಮರ್ಶಿಸು ವುದಿಲ್ಲ. ಅದರಲ್ಲಿ ಸ್ತ್ರೀ ಪ್ರಜ್ಞೆಯ ತೀವ್ರವಾದ ಒಳದನಿ ಯಿದೆ. ಅದನ್ನು ನನ್ನ ಸ್ನೇಹಿತರು ಇಷ್ಟಪಡುವುದಿಲ್ಲ. ಆ ಪುಸ್ತಕಕ್ಕೆ ಖಂಡಿತ ವಿಮರ್ಶೆ ಸಿಗುವುದಿಲ್ಲ ಎಂದು ನಾನು ಭವಿಷ್ಯ ನುಡಿಯುತ್ತೇನೆ."

ಸ್ತ್ರೀವಾದಿ ವಿಮರ್ಶೆಯ ಮೊದಲ ಮಾದರಿಗಳನ್ನು ನಾವು ಈ ಪುಸ್ತಕದಲ್ಲಿ ಕಾಣಬಹುದು. ಸಾಹಿತ್ಯದಲ್ಲಿ ಮಹಿಳಾ ಪರಂಪರೆಯೊಂದನ್ನು ಗುರುತಿಸುವ ಕೆಲಸವನ್ನು ಅವಳು ಮಾಡಿದಳು. ಮಹಿಳೆಯರ ಸಾಮಾಜಿಕ ಸ್ಥಿತಿಗತಿ ಅವರ ಬರವಣಿಗೆಯ ಮೇಲೆ ಯಾವ ರೀತಿ ಪ್ರಭಾವ ಬೀರಿದೆ? ಎಂಬುದನ್ನು ಮೊದಲಬಾರಿಗೆ ಗಮನಿಸಿದ್ದು ವರ್ಜಿನಿಯಾ ವೂಲ್ಫಳೇ.

ಬಡತನ ಮತ್ತು ಅಧೀನತೆ, ಇವೇ ಲೇಖಕಿಯರ ದೊಡ್ಡ ಶತ್ರುಗಳು, ಎಂಬುದನ್ನು ಅವಳು ಸಾಬೀತು ಪಡಿಸಿ ತೋರಿಸಿದಳು. ಸೃಜನಶೀಲ ಮನಸ್ಸಿನ ಮೇಲೆ ವೈಯಕ್ತಿಕ ಹಾಗೂ ಬೌದ್ಧಿಕ ಬಡತನ ತೀವ್ರ ಪರಿಣಾಮವನ್ನುಂಟು ಮಾಡುತ್ತದೆ. ಇನ್ನೊಬ್ಬರಿಗೆ ಅಧೀನವಾದ ಮನಸ್ಸು, ಸ್ವಾತಂತ್ರ್ಯವಿರದ ಮನಸ್ಸು, ಮಹತ್ವವಾದದ್ದನ್ನು ಸೃಷ್ಟಿಸಲು ಸಾಧ್ಯವಿಲ್ಲ ಎಂದು ಅವಳು ಪ್ರತಿಪಾದಿಸಿದಳು. ಆದ್ದರಿಂದಲೇ ಲೇಖಕಿಗೆ ಬಡತನ ನಿವಾರಣೆ ಮತ್ತು ಸ್ವಾತಂತ್ರ್ಯ ಸಂಪಾದನೆ ಎರಡೂ ಮುಖ್ಯ ಎಂದು ಅವಳಿಗೆ ತೋರಿತು. ಈ ಆಲೋಚನೆಯ ಹಿನ್ನೆಲೆಯಲ್ಲಿ ಅವಳು ತನ್ನ ಪ್ರಖ್ಯಾತ ವಾದವನ್ನು ಈ ರೀತಿ ಮಂಡಿಸಿದಳು:

"ಕೃತಿ ರಚಿಸಲು ಲೇಖಕಿಗೆ ಸ್ವಂತ ಆದಾಯವಿರಬೇಕು ಮತ್ತು ತನ್ನದೇ ಆದ ಕೊಠಡಿಯೊಂದಿರಬೇಕು."

ಈ ವಾದ ಹೊರನೋಟಕ್ಕೆ ತಮಾಷೆಯದಾಗಿ ಕಾಣ ಬಹುದು. ಆದರೆ ಸುಸಂಬದ್ಧವಾಗಿ ಯೋಚಿಸಿದರೆ ಅದರ ಹಿಂದಿರುವ ಸತ್ಯಾಸತ್ಯತೆ ಸ್ಪಷ್ಟವಾಗುತ್ತದೆ. ಮಹಿಳೆಯ ಮಾನಸಿಕ ಹಾಗೂ ದೈಹಿಕ ಕೀಳರಿಮೆಗೆ ಕಾರಣ ಅವಳು ಆರ್ಥಿಕವಾಗಿ ಪುರುಷನನ್ನು ಅವಲಂಬಿಸಿರುವುದು. ಆದ್ದರಿಂದ ಸ್ವಂತ ಆದಾಯ ಇದ್ದರೆ ಅವಳಿಗೆ ವಿಶೇಷ ಆತ್ಮವಿಶ್ವಾಸ, ಧೈರ್ಯ ಬರುತ್ತದೆ—ಒಂದು ದೃಷ್ಟಿಯಲ್ಲಿ ಆದಾಯ ಆಲೋಚಿಸುವ ಸ್ವಾತಂತ್ರ್ಯದ ಮತ್ತು ಸ್ವಾಯತ್ತತೆಯ ಪ್ರತೀಕ ಎನ್ನಬಹುದು.

"ಪ್ರವಾಸ ಮಾಡಲು ಹಣ ಬೇಕು. ಮನಸ್ಸನ್ನು ಚಿಂತನೆಗೆ ಹಚ್ಚಲು, ಪ್ರಪಂಚದ ಭೂತ-ಭವಿಷ್ಯಗಳ ಬಗ್ಗೆ ಆಲೋಚನೆ ಮಾಡಲು, ಪುಸ್ತಕಗಳ ಬಗ್ಗೆ ಕನಸು ಕಾಣಲು, ಬೀದಿ ಮೂಲೆಗಳಲ್ಲಿ ಅಲೆದಾಡಲು, ಜನರನ್ನು ಅವಲೋಕಿಸಲು, ಚಿಂತನೆ ಮನಸ್ಸಿನಾಳದಲ್ಲಿ ಬೇರು ಬಿಡಲು ಹಣ ಬೇಕು." ಎಂದು ಹೇಳುವಾಗ ಒಬ್ಬ ಲೇಖಕಿಯ ಬರವಣಿಗೆಗೆ ಸಮಗ್ರತೆ ಬರಲು ಮೇಲಿನ ಅನುಭವಗಳೆಲ್ಲ ಎಷ್ಟು ಮುಖ್ಯ ಎನ್ನುವುದರತ್ತ ಬೊಟ್ಟು ಮಾಡುತ್ತಾಳೆ.

ವಿಮರ್ಶಕರ ಧೋರಣೆಯನ್ನೂ ಅವಳು ಪ್ರಶ್ನಿಸುತ್ತಾಳೆ ಯುದ್ಧ ಅಥವಾ ಹೊರ ಜಗತ್ತಿನ ಬಗ್ಗೆ ಬಳೆಯುವುದು ಶ್ರೇಷ್ಠ ಸಾಹಿತ್ಯ, ಮನೆಯೊಳಗಿನ ಲೋಕದ ಬಗ್ಗೆ ಬರೆಯುವುದು ಸಾಧಾರಣ ಸಾಹಿತ್ಯ ಎಂಬ ಪರಿಕಲ್ಪನೆ ತಪ್ಪು ಎಂಬಂಥ ವಾದ ಇಲ್ಲಿ ಕಾಣುತ್ತದೆ. ವಸ್ತು ಯಾವುದೇ ಆಗಲಿ ಅದರ ಬಗೆಗಿರುವ ತೀವ್ರ ಒಳನೋಟಗಳೇ ಶ್ರೇಷ್ಠತೆಯ ಆಧಾರವಾಗಿರಬೇಕು ಎನ್ನುವ ತೀರ್ಮಾನ ಗೋಚರಿಸುತ್ತದೆ.

ಮೇಧಾವಿತನ ಬಡತನದಲ್ಲಿ ಅರಳುವುದಿಲ್ಲ. ಬೌದ್ಧಿಕ ಸ್ವಾತಂತ್ರ್ಯ ಯಾವಾಗಲೂ ಪ್ರಾಪಂಚಿಕ ವಸ್ತುಗಳ ಮೇಲೆಯೇ ಅವಲಂಬಿಸಿದೆ". ಎಂದು ನುಡಿಯುತ್ತಾ ಖ್ಯಾತರಾದ ಹತ್ತು ಜನ ಆಂಗ್ಲ ಲೇಖಕರ ಪಟ್ಟಿಮಾಡಿ ಅವರೆಲ್ಲ (ಒಬ್ಬರನ್ನು ಬಿಟ್ಟು) ಶ್ರೀಮಂತರಾಗಿದ್ದರು ಮತ್ತು ಉನ್ನತವ್ಯಾಸಂಗ ಮಾಡಿದ್ದರು ಎಂಬುದನ್ನು ಶೃತಪಡಿಸುತ್ತಾಳೆ. ಭಾರತೀಯ ಸಂದರ್ಭಕ್ಕೆ ಹೋಲಿಸಿದರೂ ಒಳ್ಳೆಯ ಲೇಖಕರೆಲ್ಲಾ ಅಧ್ಯಾಪಕರು ಮತ್ತು ಒಳ್ಳೆಯ ಆದಾಯ ಉಳ್ಳವರಾಗಿದ್ದಾರೆ. ಸಾಕಷ್ಟು ಹಣ ಮತ್ತು ವಿದ್ಯಾಭ್ಯಾಸ ಎರಡಕ್ಕೂ ಅವಕಾಶವಿಲ್ಲದ ಲೇಖಕಿ ಸಹಜವಾಗಿಯೇ ಹಿಂದೆ ಬಿದ್ದಳು ಎಂಬ ವರ್ಜೀನಿಯಾ ತರ್ಕ ಒಪ್ಪುವಂತಿದೆ.

---

"ಲೇಖಕಿಗೆ ತನ್ನದೇ ಆದ ಕೊಠಡಿಯೊಂದಿರಬೇಕು", ಎಂದು ಪ್ರತಿಪಾದಿಸುವ ಮನಸ್ಸಿನ ಹಿಂದೆ 'ಸ್ವಂತ ಕೊಠಡಿ' ಬೌದ್ಧಿಕ ಸ್ವಾತಂತ್ರ್ಯದ ಸಂಕೇತವಾಗಿ ನಿಂತಿದೆ. ಲೇಖಕಿಗೆ ಸ್ವತಂತ್ರವಾಗಿ ಆಲೋಚಿಸಲು ಮತ್ತು ತನಗನಿಸಿದ್ದನ್ನು ಮುಕ್ತವಾಗಿ ಹೆದರಿಕೆಯಿಲ್ಲದೆ ಬರೆಯಲು ಏಕಾಂತ ಬೇಕು. ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿಯ ಸಮಗ್ರತೆಯೇ ಸಾಹಿತ್ಯದ ಬೆನ್ನೆಲುಬಾಗಿರುವಾಗ, ಇಂಥ ಏಕಾಂತತೆ ಮಹಿಳೆಗೆ ವಿಶೇಷ ಶಕ್ತಿ ನೀಡಬಲ್ಲುದು."

---

"ಲೇಖಕಿಗೆ ತನ್ನದೇ ಆದ ಕೊಠಡಿಯೊಂದಿರಬೇಕು," ಎಂದು ಪ್ರತಿಪಾದಿಸುವ ಮನಸ್ಸಿನ ಹಿಂದೆ 'ಸ್ವಂತ ಕೊಠಡಿ' ಬೌದ್ಧಿಕ ಸ್ವಾತಂತ್ರ್ಯದ ಸಂಕೇತವಾಗಿ ನಿಂತಿದೆ. ಲೇಖಕಗೆ ಸ್ವತಂತ್ರವಾಗಿ ಆಲೋಚಿಸಲು ಮತ್ತು ತನಗನಿಸಿದ್ದನ್ನು ಮುಕ್ತವಾಗಿ ಹೆದರಿಕೆಯಿಲ್ಲದೆ ಬರೆಯಲು

ಏಕಾಂತ ಬೇಕು. ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿಯ ಸಮಗ್ರತೆಯೇ ಸಾಹಿತ್ಯದ ಬೆನ್ನೆಲುಬಾಗಿರುವಾಗ, ಇಂಥ ಏಕಾಂತತೆ ಮಹಿಳೆಗೆ ವಿಶೇಷ ಶಕ್ತಿ ನೀಡಬಲ್ಲುದು."

ಜೇನ್ ಆಸ್ಟಿನ್ ಎಲ್ಲರೂ ಬಂದು ಹೋಗುವ ಹಜಾರದಲ್ಲಿ ಕುಳಿತು ಬರೆಯುತ್ತಿದ್ದಳು. "ಯಾರಾದರೂ ಬಂದರೆ ಅವಳು ತನ್ನ ಹಸ್ತಪ್ರತಿಯನ್ನು ಬ್ಲಾಟಿಂಗ್ ಪೇಪರಿನ ಕೆಳಗೆ ಬಚ್ಚಿಡುತ್ತಿದ್ದಳು", ಲೇಖಕಿಯರ ಇಂಥ ಪರಿಸ್ಥಿತಿ ವರ್ಜೀನಿಯಾ ವೂಲ್ಫಳ ಮೇಲೆ ತೀವ್ರ ಪರಿಣಾಮವನ್ನುಂಟುಮಾಡಿತು. ಕೃತಿಯೊಂದನ್ನು ಬರೆಯುವಾಗ ಸಿಕ್ಕಿಬೀಳುವುದು ಅವಮಾನಕರವಲ್ಲ ಎಂಬ ವಾದದೊಂದಿಗೆ ಅವಳು ತನ್ನ 'ಪ್ರತ್ಯೇಕ ಕೊಠಡಿ'ಯ ನಿಲುವನ್ನು ಅನಾವರಣ ಮಾಡಿದಳು ಅನ್ನಿಸುತ್ತದೆ.

ಅವಕಾಶಗಳಿಂದ ವಂಚಿತರಾದವರು ಇತರರ ಬಗ್ಗೆ ಕಹಿ ಭಾವನೆ, ದ್ವೇಷ ಮತ್ತ ಕೋಪಗಳಿಂದ ಬರೆಯುತ್ತಾರೆ. ಇಂಥ ಬರವಣಿಗೆ ಶ್ರೇಷ್ಠ ಸಾಹಿತ್ಯವಾಗಲಾರದು. ಇವೆಲ್ಲವನ್ನೂ ನಿವಾರಿಸಿಕೊಂಡು ತಾನೇ ತಾನಾಗಿ ಕೃತಿ ರಚಿಸುವ ಸಾಮರ್ಥ್ಯ ಬರಬೇಕಾದರೆ, ಅಭಿವ್ಯಕ್ತಿಯಲ್ಲಿ ಮುಕ್ತತೆ, ಸಮಗ್ರತೆ, ಸಾಂದ್ರತೆ ಕಾಣಬೇಕಾದರೆ, ಲೇಖಕಿಗೆ ಸ್ವಾತಂತ್ರ್ಯ, ಆದಾಯ, ಏಕಾಂತ, ಇವೆಲ್ಲವೂ ಅಗತ್ಯ.

"ನಮಗೆ ಸ್ವಾತಂತ್ರ್ಯದ ಅನುಭವವಿದ್ದರೆ, ನಾವು ಯೋಚಿಸುವುದನ್ನೆಲ್ಲ ಅಂಜಿಕೆಯಿಲ್ಲದೆ ಬರೆಯುವ ಧೈರ್ಯವಿದ್ದರೆ, ನಮ್ಮ ಹಜಾರಗಳಿಂದ ಹೊರಗೆಹೋಗಿ ಜನರನ್ನು ಹೊರ ಜಗತ್ತಿನಲ್ಲಿ ನೋಡಿದರೆ. ಗಿಡ ಮರ ಆಕಾಶಗಳ ಜೊತೆಗೆ–ವಾಸ್ತವತೆಯ ಜೊತೆಗೆ ಮುಖಾಮುಖಿಯಾಗಿ ಯಾರನ್ನೂ ಅವಲಂಬಿಸದೆ ನಾವೇ ನಾವಾಗಿ ಬೆಳೆದರೆ ಶ್ರೇಷ್ಠ ಸಾಹಿತ್ಯ ರಚನೆ ಖಂಡಿತಾ ಸಾಧ್ಯ", ಎನ್ನುವ ವೂಲ್ಫಳ ಮಾತುಗಳು ಇಂದಿನ ಲೇಖಕಿಯರಿಗೂ ಪ್ರಸ್ತುತವಾಗುತ್ತವೆ.

"A room of one's own" ಕೃತಿ, ಸ್ತ್ರೀಪರ ಚಿಂತನೆಯ ಮೊಟ್ಟಮೊದಲ ಕೃತಿ ಎಂದು ಧಾರಾಳವಾಗಿ ಹೇಳಬಹುದು. ●

# 'ವಿವಿಧ ಸಾಮಾಜಿಕ ಅನುಭವದ ಲೋಕಗಳು ಮತ್ತು ಸಾಹಿತ್ಯದ ಆಕೃತಿ—ಮಹಿಳೆಯ ಅನುಭವ'

ಸಾಹಿತ್ಯ ಪ್ರಪಂಚದ ಮೇಲೆ ಬೇರೆ ಬೇರೆ ಸಾಮಾಜಿಕ ಅನುಭವದ ಲೋಕಗಳು ಎಂಥ ಪರಿಣಾಮ ಬೀರುತ್ತವೆ ಎಂದು ಕೇಳುವ ಮೂಲಕ ನಾವು ಸಾಹಿತ್ಯ ಮತ್ತು ಸಮಾಜದ ನಡುವಿನ ಸಂಬಂಧವನ್ನು ಹೊಸ ರೀತಿಯಲ್ಲಿ ಕಲ್ಪಿಸಲು ಸಾಧ್ಯ. ನಮ್ಮ ಬದುಕನ್ನು ರೂಪಿಸುವ ಶಕ್ತಿಗಳನ್ನು ತಿಳಿಯಲು ಸಮಾಜದ ಒಟ್ಟಾರೆ ಕಲ್ಪನೆಗಿಂತ ಅದರ ವಿಭಿನ್ನ ಘಟಕಗಳು ಮುಖ್ಯವಾಗುತ್ತವೆ. ಸಮಾಜದಲ್ಲಿ ವ್ಯಕ್ತಿಗಾಗುವ ಅನುಭವಗಳು ಅವರು ಸದಸ್ಯರಾಗಿರುವ ಸಾಮಾಜಿಕ ಗುಂಪುಗಳನ್ನು ಅವಲಂಬಿಸಿರುತ್ತವೆ—ಇದು ದೇಶ, ಜನಾಂಗ, ಜಾತಿ, ಧರ್ಮ, ವರ್ಗ, ಲಿಂಗ—ಯಾವುದಾದರೂ ಆಗಬಹುದು. ಲಿಂಗಭೇದ ಸೃಷ್ಟಿಸುವ ಭಿನ್ನ ಲೋಕಗಳನ್ನು ಆಧಾರವಾಗಿಟ್ಟುಕೊಂಡು, ಮಹಿಳೆಯರ ಭಿನ್ನ ಸಂವೇದನೆ ಹಾಗು ಅಭಿವ್ಯಕ್ತಿಗಳು ಸಾಹಿತ್ಯದ ಆಕೃತಿಯನ್ನು re-define ಮಾಡುತ್ತವೆಯೇ ಎನ್ನುವ ಮಾತನ್ನು ಇಲ್ಲಿ ಪ್ರಸ್ತಾಪಿಸುತ್ತೇನೆ.

ಇವತ್ತು 'ಉತ್ಕೃಷ್ಟ ಸಾಹಿತ್ಯ' ಎನ್ನುವುದು blanket term ಆಗಿ ಉಳಿದಿದೆ. ಬಹಳಷ್ಟು ಪುಢಾರಿತನಕ್ಕೂ ಗುಂಪುಗಾರಿಕೆಗೂ ಎಡೆಮಾಡಿಕೊಟ್ಟಿದೆ. ಎಷ್ಟೋ ಹೆಂಗಸರ ಬರವಣಿಗೆಯನ್ನೂ ಕೆಲವು ಪುರುಷರ ಬರಹಗಳನ್ನೂ ignore ಮಾಡುವ tactic ಆಗಿದೆ. ಆದರೆ, ನಾವು ಇಲ್ಲಿ ಗಮನಿಸಬೇಕಾದ ಅಂಶ ಇಷ್ಟೆ: 'ಶ್ರೇಷ್ಠತೆ'ಯ ಅರ್ಥವನ್ನು ಜಡವಾಗಿಸುವ ಬದಲು, ಅಂದರೆ, ಅದನ್ನು ಶಿಥಿಲವಾದ ಮೌಲ್ಯವನ್ನಾಗಿಸುವ ಬದಲು, ಅದು ಮೌಲ್ಯವಾಗಿ ರೂಪುಗೊಂಡಿರುವ ಕ್ರಿಯೆಯನ್ನು ಮತ್ತು ಸಾಮಾಜಿಕ ಸಂದರ್ಭಗಳನ್ನು' ನಾವು ಗಮನಿಸಿದರೆ, ಸಾಹಿತ್ಯ ಮೌಲ್ಯಮಾಪನಕ್ಕೇ ಹೊಸ ಅರ್ಥ ಕೊಡುವುದು ಸಾಧ್ಯ. ಈ ನಿಟ್ಟಿನಲ್ಲಿ ಸ್ತ್ರೀವಾದಿ ವಿಮರ್ಶೆ ಹೊಸ ಆಲೋಚನೆಯ ಮಾದರಿಯಾಗಿ ಬಂದಿದೆ.

ಮಹಿಳಾ ಸಾಹಿತ್ಯದ ಭಿನ್ನಲೋಕವನ್ನು ಅರ್ಥೈಸುವ ಯತ್ನದಲ್ಲಿ ಸ್ತ್ರೀವಾದಿ ವಿಮರ್ಶೆಯು ಸಾಹಿತ್ಯಕ್ಕೆ ಸಂಬಂಧಿಸಿದ ಹಲವು ಪ್ರಶ್ನೆಗಳಿಗೆ ಹೊಸ ದೃಷ್ಟಿಕೋನವನ್ನು ನೀಡಿದೆ. ಶ್ರೇಷ್ಠತೆಯ ಲಕ್ಷಣಗಳೇನು? ಈ ಮೌಲ್ಯ ಹೇಗೆ ನಿರ್ಮಾಣವಾಗುತ್ತದೆ? ಶ್ರೇಷ್ಠ ಸಾಹಿತ್ಯ ಯಾವುದು? ಸಾಹಿತ್ಯ ಅಂದರೇನು? ಸಾಹಿತ್ಯಕ ಭಾಷೆ ಅಥವಾ literary language ಅಂದರೇನು? ನಿಮ್ಮ ಕಲೀಗ್‌ಗೆ ಬರೆದಿಟ್ಟ note ಕೂಡ literary ಆಗಬಹುದೇ? ಅಥವಾ ಸಾಹಿತ್ಯ ಎನ್ನಿಸಿಕೊಳ್ಳಲು ಅದು ನಿರ್ದಿಷ್ಟ ಆಕಾರವನ್ನೇ ಹೊಂದಿರಬೇಕೆ? ಸಾಹಿತ್ಯಕ್ಕೂ ಸಾಹಿತ್ಯ ಪ್ರಕಾರಕ್ಕೂ ಇರುವ ಸಂಬಂಧ ಎಂತಹದು? ಸಾಹಿತ್ಯಕ್ಕೂ ಭಾಷೆಗೂ ಇರುವ ಸಂಬಂಧ ಎಂಥದು? ಸಾಹಿತ್ಯಕ್ಕೂ ಸಾಹಿತಿಗೂ ಏನು ಸಂಬಂಧ? ವ್ಯಾಖ್ಯಾನವಿಲ್ಲದೆ ಸಾಹಿತ್ಯದ ಅಸ್ತಿತ್ವ ಏನು? ಚಾಲ್ತಿಯಲ್ಲಿರುವ ವ್ಯಾಖ್ಯಾನಗಳಿಗಿಂತ ಭಿನ್ನವಾದ ರೀತಿಯಲ್ಲಿ ಸ್ತ್ರೀವಾದಿ ವಿಮರ್ಶೆ ಈ ಪ್ರಶ್ನೆಗಳನ್ನು ಉತ್ತರಿಸಲು ಆರಂಭಿಸುತ್ತಿದೆ.

ಪುರುಷ ರಚಿತ ಸಾಹಿತ್ಯವನ್ನು ಸ್ತ್ರೀವಾದಿ ದೃಷ್ಟಿಯಿಂದ ವಿಮರ್ಶಿಸುವುದರ ಜತೆಗೆ ಮಹಿಳೆಯರ ಬರವಣಿಗೆಯ ವೈಶಿಷ್ಟ್ಯಗಳನ್ನು ತೋರಿಸುವುದೂ ಈ ವಿಮರ್ಶೆಯ ಮುಖ್ಯ ಕೆಲಸ. ಹಲವು ಸ್ಥಾಪಿತ ಮೌಲ್ಯಗಳನ್ನು ವಿಶ್ಲೇಷಿಸುವುದು ಈ ಸಂದರ್ಭದಲ್ಲಿ ಅನಿವಾರ್ಯವಾಗಿದೆ. ಸಾಹಿತ್ಯ ಶ್ರೇಷ್ಠತೆಯ ಮಾನದಂಡಗಳ ಬದಲಾವಣೆಗೆ ಒತ್ತಾಯಿಸಿ, ಇದು ಸಾಹಿತ್ಯದ ಸ್ವರೂಪವನ್ನೇ ಬದಲಾಯಿಸುವ ಶಕ್ತಿಯನ್ನೊಳಗೊಂಡಿದೆ.

ಆದರೆ ಈ ಶಕ್ತಿ ಮೂರ್ತವಾಗಬೇಕಾದರೆ ಮಹಿಳಾ ಬರವಣಿಗೆಯ ಭಿನ್ನತೆಯ ಆಧಾರಗಳನ್ನು ಶೋಧಿಸಬೇಕು. ಮಹಿಳಾ ಸಾಹಿತ್ಯದ, ಅದರ ಭಿನ್ನತೆಯ ಬಗ್ಗೆ ಈಚೆಗೆ ಚರ್ಚೆ ಶುರುವಾಗಿದ್ದರೂ ಅದು ಇನ್ನೂ polemical

ಹಂತದಲ್ಲೇ ಉಳಿದಿರುವುದರಿಂದ, ವಿಶ್ಲೇಷಣಾ ಸಾಧನವಾಗಿ ಮಾರ್ಪಾಡಾಗಿಲ್ಲ. ಹೀಗಾಗಬೇಕಾದರೆ ಈ ಭಿನ್ನತೆಯ ಆಧಾರವೇನು ಎಂದು ಸ್ವಲ್ಪ ತಲೆಕೆಡಿಸಿಕೊಳ್ಳಬೇಕಾಗುತ್ತದೆ. ಹೆಂಗಸಿಗೇ ವಿಶಿಷ್ಟವಾದ ಸಂವೇದನೆ ಅವಳ ಅಭಿವ್ಯಕ್ತಿಯಲ್ಲಿನ ಭಿನ್ನತೆಗೆ ಕಾರಣ ಎಂದು ಹಲವರು ಅಭಿಪ್ರಾಯಪಟ್ಟದ್ದಾರೆ.

ನನ್ನ ಅಭಿಪ್ರಾಯದಲ್ಲಿ ಮಹಿಳಾ ಸಾಹಿತ್ಯದಲ್ಲಿನ ಸ್ತ್ರೀ ಸಂವೇದನೆ ಸಮಾಜದಲ್ಲಿ ಅವಳಿಗಾಗುವ ಅನುಭವಗಳನ್ನೂ ಅವುಗಳಿಗೆ ಅವಳು ಸ್ಪಂದಿಸುವ ರೀತಿಯನ್ನೂ ಅವಲಂಬಿಸಿದೆ.

ಹೆಣ್ಣುತನಕ್ಕೆ ನಿಕಟ ಸಂಪರ್ಕ ಹೊಂದಿರುವ ಸ್ತ್ರೀ ಸಂವೇದನೆಯು, ಆ ಹೆಣ್ಣುತನದಿಂದಾಗಿ ಸಮಾಜದಲ್ಲಿ ಒದಗುವ ಅನುಭವಗಳಿಂದ ಮೂಡುತ್ತದೆ. ಈ ಅನುಭವಗಳನ್ನು ಲೇಖಕಿ ಗ್ರಹಿಸುವ ರೀತಿ, ಅದಕ್ಕೆ ಅವಳು ತೋರುವ ಪ್ರತಿಕ್ರಿಯೆ, ನೀಡುವ ವ್ಯಾಖ್ಯಾನ, ಸ್ತ್ರೀ ಸಂದೇದನೆಯ ವಿಶಿಷ್ಟ ಬುನಾದಿ ಎನ್ನಬಹುದು.

ಹೆಣ್ಣುತನದ ಅನುಭವ ಮತ್ತು ಸ್ತ್ರೀ ಸಂವೇದನೆ— ಇವುಗಳ ನಡುವಿನ ಸಂಬಂಧ, ಮತ್ತು ಇದಕ್ಕೂ ಮಹಿಳಾ ಬರವಣಿಗೆಗೂ ಇರುವ ಸಂಬಂಧವನ್ನು ವಿಷದಪಡಿಸುವ ಕೆಲಸ ಈಗ ಮುಖ್ಯವಾಗಿದೆ. ಸಮಾಜದಲ್ಲಿ ನಮಗಾಗುವ ಅನುಭವಗಳು, ನಾವು ಅವನ್ನು ಅರ್ಥೈಸುವ ರೀತಿ ಸ್ತ್ರೀ ಸಂವೇದನೆಯನ್ನು ನಿರ್ಧರಿಸುವುದಾದರೆ ಮಹಿಳಾ ಸಾಹಿತ್ಯದ ಭಿನ್ನತೆಯ ಆಧಾರ ಸ್ತ್ರೀ ಸಂವೇದನೆ ಆದರೆ, ಆಗ, ಆ ಬರವಣಿಗೆಯ ಸ್ವರೂಪವೂ ಭಿನ್ನವಾಗಿರುವುದು ಸಹಜ. ಇದು ಕಥಾವಸ್ತುವಿಗೆ ಸಂಬಂಧಿಸಿದ್ದಿರಬಹುದು ನಿರೂಪಣೆಯ ತಂತ್ರದಲ್ಲಿ ಕಾಣಬಹುದು, ಭಾಷೆ ಬಳಸುವುದರಲ್ಲಿರಬಹುದು, ಅಥವಾ ಆಕೃತಿಯಲ್ಲಿ ಕಾಣಬಹುದು. ಕನ್ನಡ ಸಾಹಿತ್ಯದಮಟ್ಟಿಗೆ ಹೇಳುವುದಾದರೆ' ಮಹಿಳಾ ಬರಹದಲ್ಲಿ ಇಂಥ ಭಿನ್ನತೆಯನ್ನು ಶೋಧಿಸುವ ಯತ್ನ ಅಷ್ಟಾಗಿ ನಡೆದಿಲ್ಲವೆಂದೇ ಹೇಳಬೇಕು.

ಈ ಕಾರ್ಯಕ್ಕೆ ಕೈ ಹಾಕಿದಾಗ ಉದ್ಭವಿಸುವ ಕೆಲವು ಪ್ರಶ್ನೆಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುತ್ತೇನೆ. ಮಹಿಳಾ ಸಾಹಿತ್ಯದ ಬಗ್ಗೆ ಮಾತನಾಡಿದಾಗಲೆಲ್ಲಾ ಸಾಹಿತಿಯ, ಕೃತಿಯ ಚರ್ಚೆ ಆಗುತ್ತಿದೆಯೇ ಹೊರತು ಮಹಿಳಾ ಓದುಗರ, ಓದುವ ಪ್ರಕ್ರಿಯೆಯ ಅಧ್ಯಯನ ನಡೆದಿಲ್ಲ. ಸಾಹಿತ್ಯ ಕೃತಿಯ ಜೀವಂತಿಕೆ ಅದರ ಓದುಗರನ್ನು ಅವಲಂಬಿಸಿದೆ ಎಂದು ತೋರುತ್ತದೆ. ಸಾಹಿತ್ಯಕ್ಕೆ ಈ ಜೀವಂತಿಕೆ ಬರಬೇಕಾದರೆ, ಸಾಹಿತ್ಯ ಕೃತಿಯು assume ಮಾಡುವ implicit readerನ ಸ್ಥಾನವನ್ನು ಓದುಗರು ವಹಿಸಿಕೊಳ್ಳಬೇಕಾಗುತ್ತದೆ. ಆದರೆ ಸಾಹಿತಿಯ ಅಥವಾ ಸಾಹಿತ್ಯ ಕೃತಿಯ ಹಾಗು ಓದುಗರ ಲೋಕದೃಷ್ಟಿಗಳು ಭಿನ್ನವಾದಲ್ಲಿ ಏನು ಆಗುತ್ತದೆ? ಉತ್ಕೃಷ್ಟವೆನಿಸಿಕೊಂಡ ಎಷ್ಟೋ ಸಾಹಿತ್ಯವನ್ನು ಓದುವಾಗ ಹೆಂಗಸಿಗೆ ಅದು ಯಾವ levelನಲ್ಲೂ appeal ಆಗದೇ ಇರಬಹುದು. ಉದಾಹರಣೆಗೆ, ತೇಜಸ್ವಿಯವರ ಸೊಗಸಾದ ಕಥಾಲೋಕಕ್ಕಿಂತ ವೈದೇಹಿಯವರ ಕಥಾನಕಗಳೇ ಅವಳಿಗೆ ಹೆಚ್ಚು ಹತ್ತಿರ ಅನ್ನಿಸಬಹುದು. ಇದು ಬರೀ ವೈಯಕ್ತಿಕ ಇಷ್ಟ–ಅನಿಷ್ಟಗಳ ಪ್ರಶ್ನೆಯಲ್ಲ, ಹೆಣ್ಣಾಗಿ ತಾನು ಸಮಾಜದಲ್ಲಿ ರೂಪಿಸಿಕೊಂಡಿರುವ ಸಂವೇದನೆಯ ಫಲ ಎಂದು ಸೂಚಿಸುವುದು ಅಗತ್ಯ.

---

● ಸೀಮಂತಿನಿ ನಿರಂಜನ

---

ಹೆಣ್ಣು ಮತ್ತು ಗಂಡಿನ ನಡುವಿನ ದೈಹಿಕ ಭಿನ್ನತೆ ಸಮಾಜದಲ್ಲಿ ವಿವಿಧ ಮಾರ್ಪಾಡುಗಳನ್ನು ಹೊಂದಿ, ಲಿಂಗಭೇದವಾಗಿ ನಮ್ಮಲ್ಲಿ ನೆಲೆಮಾಡಿದೆ. ಇದರಿಂದಾಗಿ ಎಲ್ಲ ರಂಗಗಳಲ್ಲೂ ಹೆಂಗಸಿನ ಸಾಮಾಜಿಕ ಅನುಭವಗಳು ಪುರುಷನದಕ್ಕಿಂತ ಭಿನ್ನವಾಗಿರುವುದು ಅನಿವಾರ್ಯ, ಒಂದೇ ಘಟನೆ ಸ್ತ್ರೀ–ಪುರುಷರ ಮೇಲೆ ವಿಭಿನ್ನ ಪ್ರಭಾವಗಳನ್ನು ಬೀರುತ್ತದೆ. ಉದಾಹರಣೆಗೆ ವಿವಾಹದಂಥ ಸಾಮಾಜಿಕ ಸಂಸ್ಥೆಯನ್ನು ತೆಗೆದುಕೊಂಡರೆ, ಸ್ತ್ರೀ–ಪುರುಷರ ಬದುಕಿನಲ್ಲಿ ಅವು ಬೇರೆ ಬೇರೆ ಅರ್ಥಗಳನ್ನೇ ಪಡೆದಿರುತ್ತದೆ. ಅನುಭವಗಳ ಈ ಭಿನ್ನತೆಯನ್ನು ಬರೀ ಲಿಂಗಭೇದಕ್ಕೆ ಸೀಮಿತಗೊಳಿಸದೆ, ಜಾತಿ–ವರ್ಗಗಳ ಭಿನ್ನ ಲೋಕಗಳನ್ನೂ ಗಮನಿಸಬಹುದು. ಇಂಥ ವಿವಿಧ ಸಾಮಾಜಿಕ ಚೌಕಟ್ಟುಗಳ ನಮ್ಮ ಸಾಮಾಜಿಕ ಅನುಭವಗಳನ್ನು ಬೇರೆ ಬೇರೆಯಾಗಿ ರೂಪಿಸುತ್ತವೆ.

ಇಂಥ ಭಿನ್ನತೆ ಬೀರುವ ವಿಶಿಷ್ಟ ಪ್ರಭಾವದಿಂದಾಗಿ ನಮ್ಮ-ಅಂದರೆ–ಹೆಂಗಸರ–ಸಂವೇದನೆಯು ಹೇಗೆ ರೂಪುಗೊಳ್ಳುತ್ತದೆ? ಹೆಣ್ಣಿನ ಈ ವಿಭಿನ್ನ ಲೋಕದೃಷ್ಟಿ ಯಾವ

ರೀತಿಯಲ್ಲಿ ಅಭಿವ್ಯಕ್ತಗೊಳ್ಳುತ್ತದೆ? ಹೇಗೆ ಮಹಿಳಾ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತದೆ? ಇವು ಇಂದು ನಮ್ಮ ಮುಂದಿರುವ ಪ್ರಮುಖ ಪ್ರಶ್ನೆಗಳು. ಮಹಿಳಾ ಸಾಹಿತ್ಯದ ಊರುಗೋಲಾದ ಸ್ತ್ರೀ ಸಂವೇದನೆಯ ವೈಶಿಷ್ಟ್ಯವನ್ನು ನಿರ್ದಿಷ್ಟ ಬರವಣಿಗೆಗಳಲ್ಲಿ ಗುರುತಿಸುವ ಕೆಲಸವನ್ನು ವಿಮರ್ಶಕರು, ಅದರಲ್ಲೂ ಸ್ತ್ರೀವಾದಿ ವಿಮರ್ಶಕರು, ತುರ್ತಾಗಿ ಮಾಡಬೇಕಾಗಿದೆ. ಹೀಗೆ ಮಾಡಿದಾಗ ಮಾತ್ರ ವಿಶ್ಲೇಷಣಾ ಸಾಧನವಾಗಿ ಅದರ ಮಹತ್ವವನ್ನು ತೋರಿಸಲು ಸಾಧ್ಯ....ಹೆಂಗಸರ ಕೃತಿಗಳಲ್ಲಿ ಈ ದೃಷ್ಟಿಯ ನೇರ ಪ್ರತಿಬಿಂಬವನ್ನು ನಿರೀಕ್ಷಿಸುವ ಬದಲು, ವಸ್ತು, ಶೈಲಿ, ತಂತ್ರ, ಆಕೃತಿ—ಇವುಗಳಲ್ಲಿ ಅದನ್ನು ಹುಡುಕಬೇಕು. ಯುದ್ಧ ಅಥವಾ ಜನಾಂಗಗಳ ಬಗ್ಗೆ ಬರೆಯುವುದಕ್ಕಿಂತ, ವೈಯಕ್ತಿಕ ಸಂಬಂಧಗಳ ಬಗ್ಗೆ ಹೆಂಗಸರು ಹೆಚ್ಚಾಗಿ ಬರೆಯುವುದು ನಿಜವಾದರೆ, ಅದನ್ನು ಗುರುತಿಸಿ ಸುಮ್ಮನಾಗುವ ಬದಲು, ಅವರ ಭಿನ್ನ ಲೋಕದೃಷ್ಟಿಯ ಎಳೆಗಳನ್ನು ಹೊರತೆಗೆಯುವ ಯತ್ನ ಮಾಡಬೇಕು. ಎಷ್ಟೋ ಬಾರಿ, ಕೃತಿಯಲ್ಲಿ ಇರುವ ರೀತಿ, ನಿರೂಪಣೆಯ ತಂತ್ರ—ಇವುಗಳ ಮೂಲಕವೂ ಭಿನ್ನತೆ ಗುರುತಿಸುವುದು ಸಾಧ್ಯ. ತಮ್ಮ ಅನುಭವಗಳಿಗೆ ಆಕಾರ ಕೊಡುವುದರಲ್ಲಿ ಪ್ರಸ್ತುತ ಕಥಾನಕ ಧಾಟಿಗಳು ಸರಿದೋರದೆ, ಹೊಸ ತಂತ್ರಗಳನ್ನು ಅವರು ರೂಪಿಸಿಕೊಳ್ಳಬಹುದು. ಅಥವಾ ಹಳೆಯ ಆಕೃತಿಯನ್ನು ಬಿಟ್ಟು ಮತ್ತೊಂದಕ್ಕೆ ಕೈ ಹಾಕಬಹುದು. ಇತ್ತೀಚೆಗೆ ಕನ್ನಡದಲ್ಲಿ ಕಾಣುವ ಕವಯಿತ್ರಿಯರು ಈ ಹುಡುಕಾಟದ ಚಿಹ್ನೆ ಏನೋ ಅನಿಸುತ್ತದೆ.

ಅದರೆ, ಎಷ್ಟರ ಮಟ್ಟಿಗೆ ಮಹಿಳೆಯರ ವಿಭಿನ್ನ ಸಾಮಾಜಿಕ ಅನುಭವಗಳು ಮತ್ತು ಅವರ ವಿಶಿಷ್ಟ ದೃಷ್ಟಿಕೋನ ಅವರ ಅಭಿವ್ಯಕ್ತಿಯಲ್ಲಿ, ಅದರಲ್ಲೂ ಅವರ ಬರವಣಿಗೆಯಲ್ಲಿ, ಕಾಣಿಸಿಕೊಂಡಿದೆ ಎನ್ನುವುದನ್ನು ಇತ್ಯರ್ಥಿಸುವುದು ಸ್ವಲ್ಪ ಕಷ್ಟದ ಕೆಲಸ. ಹೆಂಗಸಿನ ಮನಸ್ಸು, ಆಲೋಚನೆ ಮತ್ತು ಅಭಿವ್ಯಕ್ತಿಯನ್ನು colonized consiousness ಎಂದು ಮತ್ತೊಂದು ಸಂದರ್ಭದಲ್ಲಿ ಹೇಳುತ್ತಿದ್ದೆ. ಅವಳು ಭಾಷೆಯನ್ನು ಬಳಸುವಾಗಲಂತೂ ಇದು ತೀರ ಸತ್ಯ. ಅಂದರೆ, ಅವಳ ಲೋಕದೃಷ್ಟಿ, ಅನುಭವ ಬೇರೆಯಾದರೂ ಅದು ಅಭಿವ್ಯಕ್ತಿಯ ಹಂತಕ್ಕೆ ಬಂದಾಗ ಸಮರ್ಪಕವಾಗಿ ಸಂವಹನಗೊಳ್ಳದೇ ಉಳಿಯುತ್ತದೆ.

ಈ ಮೌನದ ಹಿನ್ನೆಲೆ ಹಾಗು ವ್ಯಾಪ್ತಿಗಳನ್ನು ಅರ್ಥೈಸುವಲ್ಲಿ ಆರ್ಡ್‌ನರ್ ಎಂಬ ಆಂಗ್ಲ ಮಾನವಶಾಸ್ತ್ರಜ್ಞ ಕೊಡುವ ವ್ಯಾಖ್ಯಾನ ಈ ಸಂದರ್ಭದಲ್ಲಿ ಸ್ವಲ್ಪ ಮಟ್ಟಿಗಾದರೂ ಅನ್ವಯವಾಗುತ್ತದೆ. ಮಾನವಶಾಸ್ತ್ರಜ್ಞರು ಅಧ್ಯಯನ ಮಾಡಿದ ಪ್ರತಿಯೊಂದು ಜನಾಂಗ ಹಾಗು ಅವರ ಸಂಸ್ಕೃತಿಯಲ್ಲಿ 'ಪ್ರಬಲ' ಎಂದು ಸೂಚಿಸಬಹುದಾದ ಒಂದು ಗುಂಪು ಇದ್ದು, ಅದರ ದೃಷ್ಟಿಕೋನವೇ ಎಲ್ಲ ಸಂದರ್ಭಗಳಲ್ಲೂ ಸ್ವೀಕಾರವಾಗುತ್ತಿತ್ತು. 'ಮೂಕ' ಗುಂಪಿಗೆ ಸೇರಿದ ಜನರ ಆಲೋಚನೆಗಳು ಭಿನ್ನವಾಗಿದ್ದಿರಬಹುದಾದರೂ ಅವು elaborate ಮಾದರಿಗಳಾಗಿ ಅಭಿವ್ಯಕ್ತಿಗೊಳ್ಳುತ್ತಿರಲಿಲ್ಲ. ಅವರ ಮೌನ ಮಾತಾಗಬೇಕಾದರೆ 'ಪ್ರಬಲ' ಗುಂಪಿನ ಭಾಷೆ ಮತ್ತು ದೃಷ್ಟಿಕೋನವನ್ನೇ ಬಳಸಬೇಕಾಗಿತ್ತು. ಅವರ ಮೌಲ್ಯಗಳ ಚೌಕಟ್ಟಿನೊಳಗೇ ಬದುಕಬೇಕಾಗಿತ್ತು. ಹೆಂಗಸರ ಬರವಣಿಗೆಯನ್ನು ಸುತ್ತುವರಿದಿರುವ ತೊಡಕುಗಳನ್ನು ಗುರುತಿಸುವಲ್ಲಿ ವ್ಯಾಖ್ಯಾನದ ಈ ಮಾದರಿಯನ್ನು ಉಪಯೋಗಿಸಬಹುದೇನೋ. ಬಹುಷಃ ಬೇರೆ ಬೇರೆ ಸಾಮಾಜಿಕ ಅನುಭವಗಳಿದ್ದೂ; ಈ ದೃಷ್ಟಿಯ ಭಿನ್ನತೆಯನ್ನು ಸಾಹಿತ್ಯದ ಮೂಲಕ ಸಾಕಷ್ಟು ದೃಢತೆಯಿಂದ ವ್ಯಕ್ತಪಡಿಸಲಾಗದಿದ್ದರೆ, ಅದಕ್ಕೆ ಶತಮಾನಗಳಿಂದ ಜಾರಿಯಲ್ಲಿರುವ processes of muting ಕಾರಣ ಎಂದು ತೋರುತ್ತದೆ. ಇದು ಹೆಂಗಸರಿಗೆ ಮಾತ್ರ ಅಲ್ಲ, ಅಂಚಿಗೆ ನೂಕಲ್ಪಟ್ಟಿರುವ ಎಲ್ಲ ಸಾಮಾಜಿಕ ಗುಂಪುಗಳಿಗೂ ಅನ್ವಯವಾಗುವ ಮಾತು. ○

---

(ಬೆಂಗಳೂರಿನಲ್ಲಿ ಫೆಬ್ರವರಿ 16, 17, 18. 1990ರಂದು ನಡೆದ
ಜಾಗೃತ ಸಾಹಿತ್ಯ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧವಿದು.)

# ಸಾಕ್ಷರತೆ—ಹೆಣ್ಣು ಮಗು

ವಿಶ್ವ ಸಂಸ್ಥೆಯು 1990ನ್ನು ಅಂತರರಾಷ್ಟ್ರೀಯ ಸಾಕ್ಷರತಾ ವರ್ಷವೆಂದು ಘೋಷಿಸಿದ್ದರೆ, ದಕ್ಷಿಣ ಏಷ್ಯಾ ಪ್ರಾದೇಶಿಕ ಸಹಕಾರ ಸಂಸ್ಥೆ (ಸಾರ್ಕ್)ಯು ಅದನ್ನು ಅಂತರರಾಷ್ಟ್ರೀಯ ಹೆಣ್ಣು ಮಗು ವರ್ಷವೆಂದು ಕರೆದಿದೆ. ಇದು ಕಾಕತಾಳೀಯವಿರಬಹುದು. ಆದರೆ ಒಂದಕ್ಕೊಂದು ಪೂರಕವಂತೂ ಹೌದು.

ಸಾಕ್ಷರತೆ ಮಾನವನ ಸರ್ವತೋಮುಖ ಬೆಳವಣಿಗೆಗೆ ಅಗತ್ಯ. ಪ್ರಾಪಂಚಿಕ ಜ್ಞಾನ ಅರಿಯಲಂತೂ ಬೇಕೇ ಬೇಕು. ಸಾಕ್ಷರತೆ ಮತ್ತು ಮಹಿಳೆಯರು, ಆರೋಗ್ಯ ಸ್ಥಿತಿಗತಿ ಹಾಗೂ ಜನಸಂಖ್ಯಾ ಸ್ಫೋಟ ಒಂದಕ್ಕೊಂದು ಸಂಬಂಧದ ಕೊಂಡಿಗಳನ್ನು ಹೊಂದಿವೆ.

ಜಗತ್ತಿನ ಜನಸಂಖ್ಯೆ ತೀವ್ರ ವೇಗದಲ್ಲಿ ಮೇಲ್ಮುಖವಾಗಿ ಓಡುತ್ತಿದೆ. 2025ನೇ ಇಸವಿ ವೇಳೆಗೆ ಅದು 10 ಶತ ಕೋಟಿ ಯಾಗಬಹುದೆಂಬ ಅಂದಾಜಿದೆ. ಜನಸಂಖ್ಯಾ ಸ್ಫೋಟವಂತೂ ತೀವ್ರ ಸಮಸ್ಯೆಗಳನ್ನು ಒಡ್ಡಲಿದೆ. ಏಕೆಂದರೆ ಅದೇ ಪ್ರಮಾಣದಲ್ಲಿ ಉತ್ಪಾದನೆಯ ರಥ ಓಡು ತ್ತಿಲ್ಲ; ಜತೆಗೆ ಜನಸಂಖ್ಯೆ ಏರುತ್ತಿರುವ ಪ್ರಮಾಣದಲ್ಲಿ ಉತ್ಪಾದನೆ ಸಾಧ್ಯವೆಂದು ಹೇಳಲಾಗದು. ಒಂದಂತೂ ನಿಜ. ಜನರಲ್ಲಿ ಈ ಸಮಸ್ಯೆಯ ತೀವ್ರತೆಯ ಅರಿವು ಇಲ್ಲ. ಅವರಿಗೆ ತಿಳುವಳಿಕೆ ಉಂಟಾಗಲು ಸಾಕ್ಷರತೆ ತೀರಾ ಅಗತ್ಯ.

ವಿಶ್ವದ ಒಟ್ಟು ಅನಕ್ಷರಸ್ಥರಲ್ಲಿ ಕಾಲು ಭಾಗದಷ್ಟು ಜನರಿಗೂ ಓದಲು, ಬರೆಯಲು ಬರುವುದಿಲ್ಲ. ಅನಕ್ಷರತೆಯು ಅವರ ಬದುಕು, ದುಡಿಮೆ ಹಾಗೂ ಸಮಾಜ ದಲ್ಲಿನ ಅವರ ಸ್ಥಾನದ ಮೇಲೆ ತೀವ್ರ ಪರಿಣಾಮ ಉಂಟು ಮಾಡುತ್ತದೆ. ಮನುಷ್ಯನಲ್ಲಿ ಕೀಳರಿಮೆ ಉಂಟು ಮಾಡುತ್ತದೆ. ಹಾಗಾದರೆ ಅಕ್ಷರಸ್ಥರೆಂದು ಯಾರನ್ನು ಕರೆಯಬಹುದು. ಸಹಿ ಹಾಕಲು, ಹಾಗೂ ಸರಳವಾದ ಸಂದೇಶಗಳನ್ನು ಓದಲು ಬಲ್ಲವರನ್ನು ಅಕ್ಷರಸ್ಥರೆಂದು ಕರೆಯಲಾಗುವುದು.

## ಗಂಭೀರ ಚಿತ್ರ

ಭಾರತದಲ್ಲಿನ ಪರಿಸ್ಥಿತಿಯನ್ನು ಗಮನಿಸಿದರೆ, ಅದು ತೀರಾ ಗಂಭೀರವಾದ ಚಿತ್ರವನ್ನೇ ನೀಡುತ್ತದೆ. ಸ್ವಾತಂತ್ರ್ಯ ಬಂದು 42 ವರ್ಷಗಳಾದರೂ ಶೇಕಡ 63 ಮಂದಿಗೆ ಓದಲು ಬರೆಯಲು ಬರುವುದಿಲ್ಲವೆಂದರೆ ಅದು ನಾಚಿಕೆಗೇಡಿನ ವಿಷಯ. ಭಾರತದಲ್ಲಿ 1951ರಲ್ಲ ಶೇಕಡ 7.9 ರಷ್ಟು ಇದ್ದ ಮಹಿಳಾ ಸಾಕ್ಷರತಾ ಪ್ರಮಾಣವು 1981ರ ವೇಳೆಗೆ ಶೇಕಡ 24.2ಕ್ಕೆ ಏರಿತು. ಪುರುಷ ರದನ್ನು ಗಮನಿಸಿದರೆ, 1951ರಲ್ಲಿ ಶೇಕಡ 24.9ರಷ್ಟು ಪುರುಷರು ಅಕ್ಷರಸ್ಥರಾಗಿದ್ದರು. 1981ರಲ್ಲಿ ಅದು 46.5ಕ್ಕೆ ಏರಿತು. ಅಂದರೆ ಮಹಿಳಾ ಸಾಕ್ಷರತೆ ಇಂದು ಪುರುಷರಲ್ಲಿ ಸುಮಾರು ಅರ್ಧದಷ್ಟು ಮಾತ್ರ.

ಹಾಗಾದರೆ ಹೆಣ್ಣು ಮಕ್ಕಳೇಕೆ ಶಾಲೆಗೆ ಹೋಗುವುದಿಲ್ಲ? ವಯಸ್ಕ ಮಹಿಳೆಯರೇಕೆ ರಾತ್ರಿ ಶಾಲೆಗಳಿಗೆ ಕಲಿಯಲು ಹೆಚ್ಚಿನ ಸಂಖ್ಯೆಯಲ್ಲಿ ಬರುವುದಿಲ್ಲ?

ಈ ಪ್ರಶ್ನೆಗಳಿಗೆ ಉತ್ತರ ಕಷ್ಟ. ಮುಂಜಾನೆಯಿಂದ ರಾತ್ರಿ ವರೆಗೆ ಗಾಣದೆತ್ತಿನಂತೆ ದುಡಿಯುವ ಮಹಿಳೆಗೆ ತಾನು ಕಲಿಯುವುದೇನು, ಯಾವಾಗ ಎಂಬ ಭಾವನೆ ಬರುವುದು ಸಹಜ. ಇಡೀ ದಿನದ ದುಡಿಮೆ. ಸಂಜೆ ಶಾಲೆಗೆ ಹೋಗಬೇಕೆಂದರೆ ಎಲ್ಲಿ ಸಾಧ್ಯ? ಶಾಲೆಗೆ ಹೋದರೂ ಮನಸ್ಸಾದರೂ ಏಕಾಗ್ರತೆ ಸಾಧಿಸಬಲ್ಲದೆ? ಆರ್ಥಿಕ ಪರಿಸ್ಥಿತಿ ಹಾಗೂ ವಿಪರೀತ ದುಡಿಮೆಯಿಂದ ವಯಸ್ಕರ ಶಿಕ್ಷಣದಲ್ಲಿ ಮಹಿಳೆಯರು ಹೆಚ್ಚು ಪಾಲ್ಗೊಳ್ಳು ವುದು ಕಷ್ಟಕರವಾಗಿದೆ. ಆದರೆ ಹೆಣ್ಣು ಮಕ್ಕಳನ್ನೇಕೆ ಶಾಲೆಗೆ ಸೇರಿಸಲು ಹಿಂಜರಿಯುವುದು? ಶಾಲೆಗೆ ಸೇರದ ಮಕ್ಕಳ ಸಂಖ್ಯೆಯಲ್ಲಿ ಶೇಕಡ 70 ಮಂದಿ ಹೆಣ್ಣು ಮಕ್ಕಳು. 11 ರಿಂದ 14 ವರ್ಷ ವಯೋಮಿತಿಯ ಹೆಣ್ಣು ಮಕ್ಕಳನ್ನು ಶಾಲೆಗೆ ಸೇರಿಸುವ ಪ್ರಮಾಣವನ್ನು

ಗಮನಿಸಿದರೆ, ಕೇರಳದಲ್ಲಿ ಅದು ಶೇಕಡ 83.97; ರಾಜಸ್ಥಾನದಲ್ಲಿ ಶೇಕಡ 19, ಮಕ್ಕಳನ್ನು ದುಡಿಮೆಗೆ ಹಚ್ಚುವುದು ಒಂದು ಕಾರಣ. ಅಜ್ಞಾನ ಮತ್ತೊಂದು ಕಾರಣ. ಆರ್ಥಿಕ ಪರಿಸ್ಥಿತಿಯೊಂದೇ ಸಕಾರಣವಾಗುವುದಿಲ್ಲ. ಏಕೆಂದರೆ ಕೇರಳದಲ್ಲಿ ಹೆಣ್ಣುಮಕ್ಕಳನ್ನು ಶಾಲೆಗೆ ಸೇರಿಸುವ ಪ್ರಮಾಣ ಹೆಚ್ಚಾಗಿದೆ. ಕೇರಳವೇನೂ ಆರ್ಥಿಕವಾಗಿ ಮುಂದುವರಿದ ರಾಜ್ಯವಲ್ಲ. ಶಾಲೆಗೆ ಕಳುಹಿಸಬೇಕಾದ ಮಹತ್ವದ ಅರಿವು ಜನರಿಗೆ ಇಲ್ಲದಿರುವುದೇ ಪ್ರಬಲ ಕಾರಣವೆಂದರೆ ತಪ್ಪಾಗಲಾರದು.

## ಉತ್ಸಾಹವಿಲ್ಲ

ಗಂಡು ಮಕ್ಕಳನ್ನು ಶಾಲೆಗೆ ಸೇರಿಸಲು ಇರುವ ಉತ್ಸಾಹ, ಕಾತರ ಹೆಣ್ಣುಮಕ್ಕಳ ವಿಚಾರದಲ್ಲಿ ಇರುವುದಿಲ್ಲ. ಜನಸಂಖ್ಯೆಯ ಅರ್ಧದಷ್ಟು ಭಾಗ ಇರುವ ಮಹಿಳೆಯರ ಬಗ್ಗೆ ಪಕ್ಷಪಾತ ಧೋರಣೆ ಬದಲಾಗಬೇಕು. ಜನರಲ್ಲಿ ಈ ಬಗ್ಗೆ ಅರಿವು ಮೂಡಿಸಬೇಕು. ರಾಷ್ಟ್ರೀಯ ವರಮಾನಕ್ಕೆ ಉತ್ಪಾದನೆ ಹಾಗೂ ಕೊಡುಗೆ ಸಲ್ಲಿಸುವ ಮಹಿಳೆಯರ ಪಾತ್ರದಲ್ಲಿನ ಹೊಸ ಆಯಾಮವನ್ನು ಜನರು ಗುರುತಿಸಬೇಕಾಗಿದೆ. ಮಹಿಳೆಯು ಹೆಂಡತಿ ಮತ್ತು ತಾಯಿಯಷ್ಟೇ ಅಲ್ಲ, ವಿವಿಧ ಸ್ತರಗಳಲ್ಲಿ ದುಡಿದು ರಾಷ್ಟ್ರದ ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದಾಳೆ. ಅದಕ್ಕೆ ಪೂರಕವಾದ ತರಬೇತಿ ಸೌಲಭ್ಯವನ್ನು ಕಲ್ಪಿಸುವುದು ಅಗತ್ಯ.

## ಭ್ರೂಣ ಸ್ಥಿತಿಯಲ್ಲೇ....

ಪಕ್ಷಪಾತವೆಂದಾಗ ಮತ್ತೊಂದು ಅಂಶವನ್ನು ಗಮನಿಸುವುದು ಮುಖ್ಯ. ಹೆಣ್ಣಿನ ಬಗ್ಗೆ ತಾರತಮ್ಯ ಭ್ರೂಣಾವಸ್ಥೆಯಲ್ಲೇ ಆರಂಭವಾಗುತ್ತದೆ ಎಂದರೆ ಆಶ್ಚರ್ಯವಾಗಬಹುದು. 21ನೇ ಶತಮಾನದತ್ತ ದಾಪುಗಾಲು ಹಾಕುತ್ತಿರುವ ನಮ್ಮ ಸಮಾಜವೇ ಹೆಣ್ಣು ಮಗುವಿನ ಬಗ್ಗೆ ತಾತ್ಸಾರ ಭಾವನೆ ತಳೆದಿರುವುದು ವಿಪರ್ಯಾಸವೇ ಸರಿ. ಎರಡು ಅಥವಾ ಮೂರನೇ ಮಗು ಹೆಣ್ಣಾಗುವುದೆಂದು ತಿಳಿದುಬಿಟ್ಟರೆ ಭ್ರೂಣಾವಸ್ಥೆಯಲ್ಲೇ ಅದಕ್ಕೆ ಸಾವು ಖಚಿತ. ಮಗುವಿನ ಲಿಂಗ ಕಂಡುಕೊಳ್ಳುವ ಪರೀಕ್ಷೆಗಳು ವಿಜ್ಞಾನದ ಕೊಡುಗೆ; ವೈದ್ಯ ಕ್ಷೇತ್ರಕ್ಕೆ ವರದಾನ. ನಿಜ, ಆದರೆ ಅದು ಹೆಣ್ಣು ಭ್ರೂಣ ಹತ್ಯೆಗೆ ಹಾದಿ ಹಾಕಿರುವುದು ದುರಾದೃಷ್ಟ.

ಎರಡನೆಯದಾಗಿ ಮಹಿಳೆ ಮತ್ತು ಹೆಣ್ಣುಮಗುವಿಗೆ ಸರಿಯಾದ ಪೌಷ್ಟಿಕ ಆಹಾರ ದೊರೆಯದೆ ತೀರಾ ಕ್ಷುಲ್ಲಕ ಕಾರಣಗಳಿಗೆ ಅವರು ಸಾವನ್ನಪ್ಪುವುದು ಸಾಮಾನ್ಯವಾಗಿಬಿಟ್ಟಿದೆ. ಭಾರತದಲ್ಲಿ ಹೆರಿಗೆ ಕಾರಣಗಳಿಂದ ಮಹಿಳೆಯರು ಸಾಯುವುದು ಇಂದಿನ ಅತ್ಯಾಧುನಿಕ ವೈದ್ಯ ವಿಜ್ಞಾನಕ್ಕೇ ಸವಾಲಾಗಿದೆ. ಹುಟ್ಟುವ ಪ್ರತಿ 100 ಮಕ್ಕಳಲ್ಲಿ 10 ಮಕ್ಕಳು ತಮ್ಮ ಮೊದಲ ವರ್ಷದ ಹುಟ್ಟುಹಬ್ಬವನ್ನೇ ಆಚರಿಸಿಕೊಳ್ಳಲು ಬದುಕಿರುವುದಿಲ್ಲ. ರೋಗಗಳಿಂದ ಅಥವಾ ಹೆರಿಗೆಗೆ ಮುನ್ನ ಅಥವಾ ಹೆರಿಗೆ ಸಮಯದಲ್ಲಿ ಈ ಮಕ್ಕಳು ಸಾಯುತ್ತವೆ. ಮಹಿಳೆಯರ ಅಜ್ಞಾನ ಹಾಗೂ ತಿಳುವಳಿಕೆ ಇಲ್ಲದಿರುವುದು ಅದಕ್ಕೆ ಒಂದು ಕಾರಣ. 'ಮಹಿಳೆಯರು ಶಾಲೆಗೆ ಹೆಚ್ಚು ಸಮಯ ಹೋದಷ್ಟೂ ಶಿಶು ಮರಣದ ಪ್ರಮಾಣವು ಗಮನಾರ್ಹವಾಗಿ ಇಳಿಮುಖವಾಗುತ್ತದೆ' ಎಂದು ಯುನಿಸೆಫ್‌ನ ಒಂದು ವರದಿ ತಿಳಿಸುತ್ತದೆ.

## ಸುಶಿಕ್ಷಿತ ಮಹಿಳೆ

ಶಿಕ್ಷಣ ನೀಡಬಹುದಾದ ಮತ್ತೊಂದು ಕೊಡುಗೆ ಎಂದರೆ, ಶಿಕ್ಷಿತ ಮಹಿಳೆಯರಿಗೆ ಕಡಿಮೆ ಮಕ್ಕಳಿರುತ್ತಾರೆ. ಅವರು ತಮ್ಮ ಹೆಚ್ಚಿನ ಸಮಯವನ್ನು ಮಕ್ಕಳಿಗೆ ವಿನಿಯೋಗಿಸಬಹುದು; ರೋಗ ನಿರೋಧಕ ಚುಚ್ಚುಮದ್ದುಗಳ ಬಗೆಗೆ ತಿಳುವಳಿಕೆ ಹೊಂದಿ ಮಕ್ಕಳ ಸಾವನ್ನು ತಡೆಯಬಹುದು, ಶಿಕ್ಷಣದಿಂದ ಸಾಮಾನ್ಯವಾಗಿ ಮದುವೆ ತಡ; ಉದ್ಯೋಗ ಹಿಡಿದರಂತೂ ಮಕ್ಕಳ ಸಂಖ್ಯೆ ಇನ್ನೂ ಕಡಿಮೆ. ಆದುದರಿಂದ ಸುಶಿಕ್ಷಿತ ಮಹಿಳೆಯರಿದ್ದರೆ ಜನಸಂಖ್ಯೆ ಮೇಲೆ ಕಡಿವಾಣ ಹಾಗೂ ಆರೋಗ್ಯವಂತ ಮಕ್ಕಳ ಚಿತ್ರ ಕಾಣುತ್ತದೆ.

ಅಂಕಿ ಅಂಶಗಳನ್ನು ಪರಿಶೀಲಿಸಿದಾಗ ಮತ್ತೊಂದು ಗಮನಾರ್ಹವಾದ ಅಂಶ ಕಣ್ಣಿಗೆ ಬೀಳುತ್ತದೆ. ಜನಸಂಖ್ಯೆಯಲ್ಲಿ ಸ್ತ್ರೀ–ಪುರುಷರ ಪ್ರಮಾಣದ ಅಂತರ ದಿನೇ ದಿನೇ ಹೆಚ್ಚುತ್ತಿದೆ. 1951ರಲ್ಲಿ ಸಾವಿರ ಪುರುಷರಿಗೆ 946 ಮಹಿಳೆಯರಿದ್ದರು. ಅದು 1981ರಲ್ಲಿ ಅದು 933ಕ್ಕೆ ಇಳಿಯಿತು. ಅಪೌಷ್ಟಿಕ ಆಹಾರ ಇದಕ್ಕೆ ಮುಖ್ಯ ಕಾರಣ.

## ದೃಢ ಸಂಕಲ್ಪ

ಈ ಸಮಸ್ಯೆಗಳಿಗೆ ಪರಿಹಾರವನ್ನೂ ಯೋಚಿಸಲೇಬೇಕು. ಏಕೆಂದರೆ ಸಾಕ್ಷರತಾ ಆಂದೋಲನವು ಯಶಸ್ವಿಯಾಗಬೇಕಾದರೆ ಅದಕ್ಕೆ ಸಮಾಜದ ಧೋರಣೆ ಅಗತ್ಯ; ಅದು ಸರ್ಕಾರ ಗಂಭೀರವಾದ ಕಾರ್ಯಕ್ರಮಗಳ ಮೇಲೂ ಅವಲಂಬಿತ. ಅಭಿವೃದ್ಧಿ ಕಾರ್ಯಕ್ರಮದಲ್ಲಿ ಸಾಕ್ಷರತೆಗೆ ಮೊದಲ ಸ್ಥಾನ ನೀಡುವಂತೆ ಮಾಡುವ ಪ್ರಯತ್ನಗಳಿಗೆ ಉತ್ತೇಜನ ನೀಡುವುದು ಸಾಕ್ಷರತಾ ವರ್ಷದ ಮುಖ್ಯ ಗುರಿ. ಹತ್ತು ವರ್ಷಗಳ ಕಾರ್ಯ ಯೋಜನೆಗೆ ವಿಶ್ವವನ್ನು ಸಿದ್ಧಪಡಿಸಿ, ಆರಂಭದ ಹೆಜ್ಜೆಯನ್ನು ಬಲವಾಗಿ ಊರುವಂತೆ ಪ್ರೇರೇಪಿಸಲು ಸಾಕ್ಷರತಾ ವರ್ಷವನ್ನು ಘೋಷಿಸಲಾಗಿದೆ.

'2000ದ ಇಸವಿ ವೇಳೆಗೆ ಎಲ್ಲರಿಗೂ ಶಿಕ್ಷಣ'—ಇದು ಸಾಕ್ಷರತಾ ವರ್ಷದ ಘೋಷಣೆ. ಅನಕ್ಷರತೆ ನಿರ್ಮೂಲನೆಗೆ ಸರ್ಕಾರದ ದೃಢ ಸಂಕಲ್ಪ ಬೇಕು. ಅದು ಹಾಕಿಕೊಳ್ಳುವ ಕಾರ್ಯಕ್ರಮದ ಮೇಲೆ ಯಶಸ್ಸು ಅವಲಂಬಿತವಾಗಿದೆ.

## ಸರ್ಕಾರದ ಭರವಸೆ

ಅಂತರರಾಷ್ಟ್ರೀಯ ಸಾಕ್ಷರತಾ ವರ್ಷದ ಕಾರ್ಯಕ್ರಮವನ್ನು ಉದ್ಘಾಟಿಸುವಾಗ ಪ್ರಧಾನ ಮಂತ್ರಿ ವಿ ಪಿ. ಸಿಂಗ್ ಅವರು 'ಅನಕ್ಷರತೆ ನಿರ್ಮೂಲನೆಗೆ ರಾಷ್ಟ್ರೀಯ ಬದ್ಧತೆ' ಎಂದು ಸಾರಿದರು.

ಪ್ರಾಥಮಿಕ ಶಾಲಾ ಶಿಕ್ಷಣಕ್ಕೆ ಆದ್ಯತೆ, ಮಕ್ಕಳು ಶಾಲೆಗೆ ಸೇರುವುದಷ್ಟೇ ಅಲ್ಲ, ಅವರು ಶಾಲಾ ಶಿಕ್ಷಣ ಪೂರೈಸುವಂತೆ ಮಾಡುವ ವಾತಾವರಣ ಸೃಷ್ಟಿಸಲು ಶಕ್ತ ಸರ್ಕಾರ ಯತ್ನಿಸುತ್ತದೆ ಎಂದು ಸಿಂಗ್ ಹೇಳಿದರು (ಒಂದನೇ ತರಗತಿಗೆ ಸೇರುವ ಮಕ್ಕಳಲ್ಲಿ ಶೇಕಡ 30ರಿಂದ 35ರಷ್ಟು ಮಕ್ಕಳು 5ನೇ ಕ್ಲಾಸ್ ವರೆಗೆ ಮುಂದುವರೆಯುತ್ತಾರೆ ಎಂಬುದು ಅಧ್ಯಯನವೊಂದರಿಂದ ತಿಳಿದು ಬಂದಿದೆ).

## ಕೇರಳ ಮಾದರಿ

ಈ ಸಂದರ್ಭದಲ್ಲಿ ಕೇರಳದ ಎರ್ನಾಕುಲಂ ಜಿಲ್ಲೆಯ ಸಾಧನೆಯನ್ನು ಪ್ರಸ್ತಾಪಿಸುವುದು ಉಚಿತ. ಈ ಜಿಲ್ಲೆಯಲ್ಲಿ ಸಂಪೂರ್ಣ ಅಕ್ಷರಸ್ತರನ್ನು ಪ್ರತಿಬಿಂಬಿಸಲು 'ಅಕ್ಷರ ಕ್ರಾಂತಿ' ಕಾರ್ಯಕ್ರಮ ಹಾಕಿಕೊಳ್ಳಲಾಯಿತು. ಅಲ್ಲಿ ಒಟ್ಟು ಅಕ್ಷರಸ್ತರಲ್ಲಿ ಶೇಕಡ 70 ರಷ್ಟು ಮಹಿಳೆಯರಿದ್ದರು ಇಡೀ ವರ್ಷ ಕೈಗೊಂಡ ವ್ಯಾಪಕ ಕಾರ್ಯಕ್ರಮದಲ್ಲಿ ನೂರಾರು ಕಾರ್ಯಕರ್ತರು ಪ್ರಮುಖ ಪಾತ್ರ ವಹಿಸಿದ್ದರು. ಹಿಂದಿನಂತೆ ಪಂಚಾಯ್ತಿ ಅಥವಾ ಬ್ಲಾಕ್ ಮಟ್ಟದಲ್ಲಿ ವಯಸ್ಕರ ತರಗತಿ ತೆರೆಯದೆ ಪ್ರತಿ ಹತ್ತು ಅನಕ್ಷರಸ್ತರಿಗೆ ಒಂದು ತರಗತಿ ನಡೆಸಲಾಯಿತು. ಸಾಧ್ಯವಾದಷ್ಟು 'ವಿದ್ಯಾರ್ಥಿ'ಗಳ ಮನೆ ಬಳಿಯೇ ಶಾಲೆ ನಡೆಸಲಾಯಿತು. ಅಧಿಕಾರಿಗಳು ಮತ್ತು ಸ್ವಯಂ ಸೇವಾ ಕಾರ್ಯಕರ್ತರ ಪರಿಶ್ರಮದ ಫಲವಾಗಿ ಎರ್ನಾಕುಲಂ ಜಿಲ್ಲೆ ಇಂದು ದೇಶದ ಪ್ರಥಮ 'ಪೂರ್ಣ ಅಕ್ಷರಸ್ತರ' ಜಿಲ್ಲೆಯಾಗಿದೆ.

ಸರ್ಕಾರದ ಕಾರ್ಯಕ್ರಮಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಸಕ್ರಿಯ ಪಾತ್ರವಹಿಸಬೇಕು. ಅಂತೆಯೇ ಸರ್ಕಾರ ಕೂಡ ಸಾಕ್ಷರತಾ ಆಂದೋಲನದ ಯಶಸ್ಸಿಗೆ ಸರಿಯಾದ ಹಾಗೂ ತೀವ್ರ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು. ಯೂನಿಸೆಫ್‌ನಂಥ ಸಂಸ್ಥೆಗಳು ಗ್ರಾಮ ದತ್ತು ತೆಗೆದುಕೊಂಡು ಅವುಗಳ ಅಭಿವೃದ್ಧಿಗೆ ಪ್ರಯತ್ನಿಸಬೇಕು. ○

○ ಎಸ್. ಗಾಯಿತ್ರಿ ದೇವಿ



## ರಂಗನಾಯಕಮ್ಮ — ಒಂದು ಕಿರು ಚಿತ್ರ

—ವಿ. ವೆಂಕಟಸುಬ್ಬಯ್ಯ

ರಂಗನಾಯಕಮ್ಮ ಆಧುನಿಕ ತೆಲುಗು ಸಾಹಿತ್ಯದ ಅತ್ಯಂತ ವಿವಾದಾಸ್ಪದ ಲೇಖಕಿ. ಆಕೆ ವಿವಾದಾತ್ಮಕ ಸಣ್ಣ ಕತೆಗಳನ್ನು, ಕಾದಂಬರಿಗಳನ್ನು, ರಾಜಕೀಯ ಟಿಪ್ಪಣಿಗಳನ್ನು, ಪ್ರಬಂಧಗಳನ್ನು ಬರೆದಿದ್ದಾರೆ. ಅನೇಕ ಅನುವಾದಗಳನ್ನೂ ಮಾಡಿದ್ದಾರೆ. ಈಕೆ ಯಾರೊಡನೆ, ಯಾವಾಗ ಬೇಕಾದರೂ ಕತ್ತಿ ಮಸೆಯಲು ಸಿದ್ಧ. ಹೊಂದಾಣಿಕೆ, ಒಪ್ಪಂದಗಳು ಈಕೆಯ ಪ್ರವೃತ್ತಿಗೆ ಹೊರತು.

ಈಕೆ ಒಪ್ಪಿಕೊಂಡ ಒಂದೇ ಒಂದು ತತ್ತ್ವ–ಮಾರ್ಕ್ಸ್ ವಾದ ಇರಬಹುದು. ಮಾರ್ಕ್ಸ್ ವಾದ, ಉತ್ಕೃಷ್ಟ ಮಾನವತಾವಾದ ಎಂಬುದು ಈಕೆಯ ಗಟ್ಟಿ ನಂಬುಗೆ. ಆದರೆ, ಈಕೆಯ ಮಾರ್ಕ್ಸ್‌ವಾದದಲ್ಲಿಯ ನಂಬುಗೆ, ಅನೇಕ ಬಗೆಯ ಮಾರ್ಕ್ಸ್‌ವಾದಿಗಳ ಮೇಲೆ ಧಾಳಿ ಮಾಡುವುದರಿಂದೇನೂ ತಡೆದಿಲ್ಲ.

ರಂಗನಾಯಕಮ್ಮ ಶ್ರೇಷ್ಠ ಸ್ತ್ರೀವಾದಿ. ಮಾರ್ಕ್ಸ್ ವಾದಿಗಳ ಹಾಗೆ ಈಗಷ್ಟೇ ಚಿಗುರಿದ ಸ್ತ್ರೀವಾದಿಗಳಿಗೂ ಈಕೆ ಗಟ್ಟಿಪಿಂಡವಾಗಿದ್ದಾರೆ. ಈಕೆಯ ಅನೇಕ ವಿವಾದಾತ್ಮಕ ಪ್ರಬಂಧಗಳು ಲೈಂಗಿಕ ಅರಾಜಕತೆಯನ್ನು ಸಂಪೂರ್ಣ ತೆರೆದಿಟ್ಟಿವೆ. ಲೈಂಗಿಕ ಅರಾಜಕತೆಯು ಹೆಂಗಸನ್ನು ಈಗಿನಕ್ಕಿಂತ ಹೆಚ್ಚಿದ ಗುಲಾಮಳನ್ನಾಗಿ ಮಾಡುತ್ತದೆ ಎಂಬುದು, ಈಕೆಯ ವಾದ. ಸಾಂಪ್ರದಾಯಿಕ ಮಾದರಿಗಳನ್ನು ತೊಡೆದು ಹಾಕಿದ ಚಲಂನ ನಂತರ ಮತ್ತಾವ ತೆಲುಗು ಲೇಖಕನೂ ಹೆಣ್ಣಿನ ಬಗ್ಗೆ ಇವಳ್ಕಿಂತ ಹೆಚ್ಚಿನ ಸಹಾನುಭೂತಿ ಹಾಗೂ ತಿಳುವಳಿಕೆಯಿಂದ ಬರೆದದ್ದಿಲ್ಲ.

ಈಕೆಯ ಬರವಣಿಗೆಯಲ್ಲಿಯ ಆಣಕ ಮತ್ತು ಹ್ಯೂಮಾನ್ಸ್, ಸೌಮ್ಯವಾಗಿ ಹಿತಕರವಾಗಿದ್ದರೂ, ರಂಗನಾಯಕಮ್ಮ ತೆಲುಗು ಸಾಹಿತ್ಯಲೋಕಕ್ಕೆ ಪದಾರ್ಪಣ ಮಾಡಿದ್ದು ದೊಡ್ಡ ಕೌತುಕವೇನೂ ಆಗಿರಲಿಲ್ಲ. ಆದರೆ ಸುಧಾರಣೆಯನ್ನೇ ಮೂಲವಸ್ತುವಾಗಿಟ್ಟುಕೊಂಡ ಆಕೆಯ 'ಬಲಿ ಪೀಠಂ', ಪುರೋಗಾಮಿ ಚಿಂತಕರ ಹಾಗೂ ಸಾಹಿತ್ಯಿಕ ವಿಮರ್ಶಕರ ಗಮನ ಸೆಳೆಯಿತು. ಈ ಪುಸ್ತಕಕ್ಕೆ ಆಂಧ್ರ ಪ್ರದೇಶದ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ದೊರಕಿತು. 'ಪೇಕ ಮೇಡಲು' 'ಅಂಧಕಾರಮ್‌ಲೋ', 'ಸ್ತ್ರೀ' ಮತ್ತು 'ಸ್ವೀಟ್ ಹೋಂ' ಕೃತಿಗಳು ಅತ್ಯಂತ ಜನಪ್ರಿಯವಾದಷ್ಟೇ, ಚರ್ಚಾಸ್ಪದವೂ ಆಗಿದ್ದವು. 'ಪೇಕ ಮೇಡಲು' ಭಾರತದ ಎಲ್ಲ ಭಾಷೆಗಳಿಗೂ ಅನುವಾದಿತವಾಗಿದೆ. ಸ್ತ್ರೀಯರ ಸ್ಥಿತಿಗತಿಯ ಬಗ್ಗೆ ರಂಗನಾಯಕಮ್ಮನ ಪೂರ್ವಾಕ್ರಮಣ, ಕಳಕಳಿ, ಈ ಎಲ್ಲ ಕಾದಂಬರಿಗಳಲ್ಲಿ ಗುರುತಿಸಬಹುದು.

1970–71 ರಲ್ಲಿ ಮಾರ್ಕ್ಸ್‌ವಾದದ ಪ್ರಭಾವದೊಳಗೆ ಬಂದಂತೆ ಈಕೆಯ ಸ್ತ್ರೀವಾದ ಹೆಚ್ಚು ಹರಿತವಾಯಿತು. ಹೊಸ ಪೀಳಿಗೆಯ ಮಾರ್ಕ್ಸ್‌ವಾದ ಹಾಗೂ ಸ್ತ್ರೀವಾದದ ಫಲಿತಾಂಶವಾಗಿ, ಆಕೆ ಅನೇಕ ಕತೆಗಳನ್ನು, ಕಾದಂಬರಿಗಳನ್ನು, ಪ್ರಬಂಧಗಳನ್ನು ಬರೆದಿದ್ದಾರೆ. ಈಕೆಯ ಅತ್ಯುತ್ತಮ ಕಾದಂಬರಿಯಾದ 'ಜಾನಕಿ ವಿಮುಕ್ತಿ'ಯಲ್ಲಿ ಪ್ರತ್ಯೇಕಿಸಲಾರದ ಈ ಎರಡೂ ತತ್ತ್ವಗಳಿಗೂ ರಂಗನಾಯಕಮ್ಮನಿಗಿರುವ ನಿಷ್ಠೆ, ಅತ್ಯಂತ ಕಲಾತ್ಮಕವಾಗಿ ಅಭಿವ್ಯಕ್ತವಾಗಿದೆ.

ಇದೇ ಅವಧಿಯ ಮತ್ತೊಂದು ಗುರುತರ ಕೃತಿ, ಸುಮಾರು 2000 ಪುಟಗಳ 'ರಾಮಾಯಣ ವಿಷವೃಕ್ಷಂ', ಆಕೆ ಈ ಪುಸ್ತಕದಲ್ಲಿ ರಾಮಾಯಣವನ್ನು ಮಾರ್ಕ್ಸ್‌ವಾದ ಸ್ತ್ರೀವಾದ, ಕೋಮುವಾದದ ದೃಷ್ಟಿಯಿಂದ ಅರ್ಥೈಸಲು ಪ್ರಯತ್ನಿಸಿದ್ದಾರೆ. ಈ ಪುಸ್ತಕ ರಂಗನಾಯಕಮ್ಮನಿಗೆ ಪ್ರಸಿದ್ಧಿ ತಂದಷ್ಟೇ ಅಪಕೀರ್ತಿಯನ್ನೂ ತಂದುಕೊಟ್ಟಿತು. ಸಂಪ್ರದಾಯವಾದಿಗಳು ಆಕೆಯನ್ನು ಕಟುವಾಗಿ, ನಿಷ್ಠುರವಾಗಿ ನಿಂದಿಸಿದರೂ, ಆಕೆಯ ವಾದಗಳನ್ನು ಅಂಗೀಕರಿಸದಿರುವುದು ಅಸಾಧ್ಯವಾಗಿತ್ತು. ಕಮ್ಯುನಿಸ್ಟರಿಗೂ,

ವಿಚಾರವಾದಿಗಳಿಗೂ, ರಾಮಾಯಣದ ಖಂಡನೆ ನುಂಗಲಾರದ ತುತ್ತಾಯಿತು.

ಇತ್ತೀಚಿನ ಆಕೆಯ ಅದ್ಭುತ ಕೆಲಸವೆಂದರೆ ಮಾರ್ಕ್ಸ್‌ನ 'ಕ್ಯಾಪಿಟಲ್'ಗೆ ಐದು ಹೊತ್ತಿಗೆಯ ಪೀಠಿಕೆ ಬರೆದದ್ದು. ಹತ್ತಾರು ಸಂಘ–ಸಂಸ್ಥೆಗಳು, ಜನ–ಧನ ಬಲವಿದ್ದೂ ದಶಕಗಳಿಂದ ಮಾಡಬೇಕೆಂದು ಯೋಚಿಸುತ್ತಾ ಬಂದ ಕೆಲಸವನ್ನು, ಈಕೆ ಏಕಾಂಗಿಯಾಗಿ ಮಾಡಿ ಮುಗಿಸಿದರು.

ರಂಗನಾಯಕಮ್ಮ ಸುಮಾರು 50 ಕತೆಗಳನ್ನು, 20 ಕಾದಂಬರಿಗಳನ್ನು, 200 ಪ್ರಬಂಧಗಳನ್ನು ಬರೆದಿದ್ದಾರೆ. ತೆಲುಗು ಗದ್ಯ ಶೈಲಿಯ ಬಗ್ಗೆ ಇತ್ತೀಚೆಗೆ ಬರೆದ ಈಕೆಯ ಕೃತಿ, ಎಳೆ ಬರಹಗಾರರನ್ನೂ, ಭಾಷಾ ತಜ್ಞರನ್ನೂ ಸಂತಸದಿಂದ ಬೆರಗುಗೊಳಿಸಿದೆ.

ರಂಗನಾಯಕಮ್ಮ ತನ್ನ ವೈಯಕ್ತಿಕ ಬದುಕಿನಲ್ಲೂ ಸೋಗು, ಆಷಾಢಭೂತಿ ತೋರಿದ್ದಿಲ್ಲ. ತನ್ನ ಹಾಗೂ ಗಂಡನ ನಡುವೆ ಸಮಾನ ಚಿಂತನೆಗಳು ಇಲ್ಲ ಎಂದು ತಿಳಿದೊಡನೆ, ಆತನನ್ನೂ, ಆತನ ಉಪನಾಮವನ್ನೂ ತ್ಯಜಿಸಿದರು. ಈಗ ರಂಗನಾಯಕಮ್ಮ ತಮ್ಮ ಗೆಳೆಯನೊಬ್ಬರೊಡನೆ ವಿವಾಹವಿಲ್ಲದೆ ಜೀವಿಸುತ್ತಿದ್ದಾರೆ. ಇದೀಗ ಈಕೆಗೆ 51 ವರ್ಷ.

ರಂಗನಾಯಕಮ್ಮ ಸುಲಭವಾಗಿ ಮರೆತು ಬಿಡುವಂಥ ಲೇಖಕಿಯಲ್ಲ. ನಮ್ಮ ಕಾಲದ ಅತ್ಯಂತ ಗಂಭೀರ ಪ್ರತಿಭಾವಂತ ಲೇಖಕಿಯಾಗಿ, ವಿಚಾರವಾದಿಯಾಗಿ ನಮ್ಮ ಗಮನ ಸೆಳೆಯುತ್ತಾರೆ. ●

—o—o—o—

## ಅಸಮಾನತೆಯಿಂದ ಅಸಮಾನತೆಯೆಡೆಗೆ

ಮಾಸ್ಕೋದಿಂದ ಪ್ರಕಟವಾಗುವ "ನ್ಯೂ ಟೈಂಸ್" ವಾರಪತ್ರಿಕೆಯ ಈಚಿನ ಒಂದು ಸಂಚಿಕೆಯಲ್ಲಿ ಹೆಮ್ಮೆಯಿಂದ ಪ್ರಕಟಿಸಿದ ಒಂದು ಸುದ್ದಿ ಕಾತ್ಯ ಎಂಬೊಬ್ಬ ಚೆಲುವೆಗೆ ಸಂಬಧಿಸಿದ್ದು. ಸಮಾಜವಾದದ ಕಟ್ಟೆಗೆಗಳನ್ನು ಒಂದೊಂದನ್ನೇ ಶಿಥಿಲಗೊಳಿಸುತ್ತಿರುವ ಸೋವಿಯತ್ ಒಕ್ಕೂಟದಲ್ಲಿ ಬಹಳ ಆಪ್ಯಾಯಮಾನವಾದ ಬದಲಾವಣೆ ಎಂಬ ರೀತಿಯಲ್ಲಿ ಈ ಕಾತ್ಯಾಳ ಸುದ್ದಿಯನ್ನು ಸ್ವೀಕರಿಸಲಾಗುತ್ತಿದೆಯೆಂದು ಪತ್ರಿಕೆ ಬೀಗಿದೆ. ಯಾವುದೋ ಜಾಹಿರಾತು ಕಂಪನಿಗೆ ಮಾದರಿ ಹೆಣ್ಣಾಗಿ ಕೆಲಸಮಾಡಲು ಮೂರು ವರ್ಷಗಳ ಕಂಟ್ರಾಕ್ಟ್‌ಗೆ ಸಹಿಮಾಡಿ ಈ ಚೆಲುವೆ ಈಚೆಗೆ ಅಮೇರಿಕಕ್ಕೆ ಹೋದಳಂತೆ. ಅಲ್ಲಿ ಹೆಚ್ಚು ಸ್ವಾತಂತ್ರ್ಯದಿಂದ ಕೆಲಸಮಾಡಲು ಅವಳಿಗೆ ಸಾಧ್ಯವಾಗುತ್ತದೆಂಬ ಆಶಯ ಅವಳದು. ಸೌಂದರ್ಯ ಸ್ಪರ್ಧೆಯಲ್ಲಿ ಕಳೆದ ವರ್ಷ ಮಾಸ್ಕೋದಲ್ಲಿ ಅವಳಿಗೆ ಬಹುಮಾನ ಬಂದಿದ್ದಿತಂತೆ. ಈಗ ಮಾದರಿ ಹೆಣ್ಣಾಗಿ ಈ ಬೆಡಗಿನ ರಾಣಿ ಜಾಹಿರಾತುಗಳಲ್ಲಿ ಕಾಣಿಸಿಕೊಳ್ಳಲಿದ್ದಾಳೆ. ಆಗಾಗ್ಗೆ ರಂಗದ ಮೇಲೆ ವಿವಸ್ತ್ರಳಾಗಿ ರಂಜಿಸಲೂ ಬಹುದು.

ಭಾರತದ ಸೌಂದರ್ಯ ರಾಣಿಯಾಗಿದ್ದ ಪಮೇಲಾ ಕಳೆದ ಒಂದು ವರ್ಷದಲ್ಲಿ ಅಂತರರಾಷ್ಟ್ರೀಯ ಸುದ್ದಿ ಮಾಡಿರುವುದು ಸರಿಯಷ್ಟೆ. ಈಗ ಅನೇಕ ವರ್ಷಗಳ ಹಿಂದೆ ಇನ್ನೊಬ್ಬ ಸೌಂದರ್ಯ ರಾಣಿ ರೀಟಾ ಫರಿಯಾ ಎಂಬುವಳು ಅಂದಿನ ವಿಯಟ್ನಾಂನಲ್ಲಿ ಅಮೇರಿಕಾ ಸೈನಿಕರಿಗೆ ಮನರಂಜನೆ ನೀಡಲು ಬಾಬ್ ಹೋಪ್ ಎಂಬುವನ ತಂಡದಲ್ಲಿ ತೆರಳಿದ್ದಳು, ಕಾತ್ಯ ಕೂಡ ಇನ್ನುಮೇಲೆ ಇಂತಹ ಸ್ವಾತಂತ್ರ್ಯವನ್ನು ಉಣ್ಣುತ್ತಾಳೆಂದು "ನ್ಯೂ ಟೈಂಸ್"ನ ಸಂತಸ. ಕಳೆದವರ್ಷ ಮಾಸ್ಕೋದ "ಸೋವಿಯತ್ ಒಕ್ಕೂಟ" ಎಂಬ ಮಾಸಿಕವು ಸೌಂದರ್ಯ ಸ್ಪರ್ಧೆಯ ಬಗ್ಗೆ ಬರೆಯುತ್ತಾ ಸೌಂದರ್ಯವನ್ನು ಸವಿಯುವ ರೀತಿಯನ್ನು ತಿಳಿಸಿಕೊಟ್ಟಿತು. ಯಾವ ಪುರೋಗಾಮಿ ತತ್ವಮೀಮಾಂಸೆಗೂ ಗೌರವ ತರಲಾರದಂಥಹ ವಿಶ್ಲೇಷಣೆ ಅದಾಗಿತ್ತು. ಮಹಿಳಾ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಬಯಸುವವರು ಎಂತಹ ಸ್ವಾತಂತ್ರ್ಯದ ಆಕಾಂಕ್ಷೆ ಇರಿಸಿಕೊಳ್ಳಬೇಕು ಎಂಬುದಕ್ಕೆ ಇದೊಂದು ಮಾರ್ಮಿಕ ಸೂಚನೆಯಾಗಿದೆ. ಲೆನಿನ್

ಮೆಚ್ಚಿಕೊಂಡಿದ್ದ ಮ್ಯಾಕ್ಸಿಂ ಗಾರ್ಕಿಯ ಒಂದು ಕತೆ "ಇಪ್ಪತ್ತಾರು ಗಂಡಸರು ಮತ್ತು ಒಬ್ಬ ಹೆಂಗಸು" ಎಂಬುದು. "ನ್ಯೂ ಟೈಂಸ್", "ಸೋವಿಯತ್ ಒಕ್ಕೂಟ", ಇತ್ಯಾದಿ ಪತ್ರಿಕೆಗಳಿಗೆ ಈ ಕತೆ ಪ್ರಸ್ತುತವಾಗಿ ಕಾಣುವುದಿಲ್ಲವೆಂದು ತೋರುತ್ತದೆ.

ರಷ್ಯದಲ್ಲಿ ಕ್ರಾಂತಿಯ ಮುನ್ನ ಮತ್ತು ಅನಂತರ ಬಹಳ ಸಕ್ರಿಯವಾಗಿ ರಾಜಕೀಯ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಭಾಗವಹಿಸಿದ್ದ ಒಬ್ಬ ಮಹಿಳೆ ಅಲೆಕ್ಸಾಂಡ್ರ ಕೊಲಂತೈ. ವಿಶ್ವದ ಮೊಟ್ಟಮೊದಲ ರಾಯಭಾರಿಯಾಗಿ ಸ್ವೀಡನ್ನಿನಲ್ಲಿ ಕೆಲಸ ಮಾಡಿದ್ದವಳು ಆಕೆ. ಕಮ್ಯುನಿಸ್ಟ್ ಪಕ್ಷದ ಕೇಂದ್ರ ಸಮಿತಿಯ ಸದಸ್ಯೆಯಾಗಿಯೂ ಕಾರ್ಯನಿರತಳಾಗಿದ್ದ ಆಕೆ ಲೇಖಕಿಯಾಗಿ ಸಹ ಹೆಸರುಗಳಿಸಿದ್ದಳು ಲೆನಿನ್ ಅವರ ನೇತೃತ್ವದಲ್ಲಿ ಕೆಲಸ ಮಾಡಿದ್ದುದರಿಂದ ಆಕೆ ಹೇಳಿದ್ದೆಲ್ಲಾ ಸರಿಯೇ ಇರಬೇಕೆಂದು ಕೆಲವರ ಅಭಿಪ್ರಾಯ. ಆಕೆ ಬರೆದಿದ್ದ ಒಂದು ಚಿಕ್ಕ ಕಾದಂಬರಿ "ಮೂರು ತರಹದವರು" ಎಂಬುದು. ಹೈದರಾಬಾದಿನ ಸ್ತ್ರೀತ್ವವಾದಿಗಳ ಅಧ್ಯಯನ ಕೂಟವೊಂದು ಇತ್ತೀಚೆಗೆ ಅದನ್ನು ತೆಲುಗಿನಲ್ಲಿ ಪ್ರಕಟಿಸಿದೆ. ಅದಕ್ಕೆ ಸುದೀರ್ಘವಾದ ಮುನ್ನುಡಿಯೊಂದನ್ನು ಬರೆದು ಪ್ರಸ್ತುತಪಡಿಸಿರುವುದನ್ನು ರಂಗನಾಯಕಮ್ಮನವರು ಗಮನಿಸಿ ಅದಕ್ಕೆ ವಿಶ್ಲೇಷಣಾತ್ಮಕ ವಿಮರ್ಶೆಯೊಂದನ್ನು "ಅಸಮಾನತೆಯಿಂದ ಅಸಮಾನತೆಯೆಡೆಗೆ" ಎಂಬ ತಮ್ಮ ಕೃತಿಯಲ್ಲಿ ನೀಡಿದ್ದಾರೆ.

---

ರಷ್ಯದಲ್ಲಿ ಕ್ರಾಂತಿಯ ಮುನ್ನ ಮತ್ತು ಅನಂತರ ಬಹಳ ಸಕ್ರಿಯವಾಗಿ ರಾಜಕೀಯ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಭಾಗವಹಿಸಿದ್ದ ಒಬ್ಬ ಮಹಿಳೆ ಅಲೆಕ್ಸಾಂಡ್ರ ಕೊಲಂತೈ. ವಿಶ್ವದ ಮೊಟ್ಟಮೊದಲ ರಾಯಭಾರಿಯೂ ಆದ ಈಕೆಯ ಹೆಸರು ವಿಶ್ವದ ಮಹಿಳಾ ಚಳುವಳಿಯಲ್ಲಿಯೇ ಹಸಿರಾದದ್ದು. ಇವಳ ಚಿಕ್ಕ ಕಾದಂಬರಿ "ಮೂರು ತರಹದವರು" ಕೃತಿಗೆ ರಂಗನಾಯಕಮ್ಮನವರು ಬರೆದ ವಿಮರ್ಶೆಯೇ "ಅಸಮಾನತೆಯಿಂದ ಅಸಮಾನತೆಯೆಡೆಗೆ" ಕೃತಿ. ಈ ಕೃತಿಯ ಪರಿಚಯ ಇಲ್ಲಿದೆ.

---

ಮೇಲೆ ತಿಳಿಸಿದ ಕೊಲಂತೈ ಅವರ ಕೃತಿಯು ಮಹಿಳಾ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವ ಮತ್ತು ಆ ಸ್ವಾತಂತ್ರ್ಯದ ಲಕ್ಷಣವನ್ನು ಭಾಗಶಃ ವಿಶದಪಡಿಸುವಂತಹ ಕೃತಿಯೆಂದು ಅದರ ತೆಲುಗು ಪ್ರಕಾಶಕರಾದ ಸ್ತ್ರೀತ್ವವಾದಿಗಳ ಅಂಬೋಣ. ನಿಜವಾದ ಕ್ರಾಂತಿಕಾರಿಗಳು ತಳೆಯಬೇಕಾದ ನಿಲುವನ್ನು ಅದು ಸ್ಪಷ್ಟಪಡಿಸುತ್ತದೆಂದು ಅವರು ಮುನ್ನುಡಿಯಲ್ಲಿ ವಿವರಿಸಿದ್ದಾರೆ. ವಸ್ತುಸ್ಥಿತಿ ಮಾತ್ರ ಸಂಪೂರ್ಣವಾಗಿ ಬೇರೆಯೇ ಇದೆ. ರಂಗನಾಯಕಮ್ಮನವರು ಹೇಳುವಂತೆ ಕ್ರಾಂತಿಕಾರಿಗಳು ಯಾರೂ ಸಹ ಎಂತಹ ಮಹಿಳಾ ಸ್ವಾತಂತ್ರ್ಯದ ಕಲ್ಪನೆಯನ್ನು ಇರಿಸಿಕೊಳ್ಳಬಾರದೆಂದು ಕೊಲಂತೈ ಅವರ ಈ ಪುಸ್ತಕ ತಿಳಿಸುತ್ತದೆ. ಸ್ವತಃ ಲೇಖಕಿ ತಾನೇನು ಉದ್ದೇಶವಿರಿಸಿಕೊಂಡಿದ್ದಳೆಂದು ಊಹಿಸುವುದು ಕಷ್ಟ. ಏಕೆಂದರೆ, ತನ್ನ ಜೀವಿತ ಕಾಲದಲ್ಲೇ ಆಕೆ ಈ ಕತೆಯನ್ನು ತನ್ನ "ಸಮಗ್ರ ಕೃತಿಗಳು" ಎಂಬ ಪ್ರಕಾಶನದಲ್ಲಿ ಸೇರಿಸದೆ ಹೊರಗಿಟ್ಟಳು. ಕತೆ ಬರೆದಾಗಿನ ಮಾನಸಿಕ ಗೊಂದಲವನ್ನು ಕಾಲಕ್ರಮೇಣ ಆಕೆ ನಿವಾರಿಸಿಕೊಂಡು ತನ್ನ ಮುಂಚಿನ ಅಪ್ರಬುದ್ಧತೆಯ ಫಲವಾದ "ಮೂರು ತರಹದವರು" ಎಂಬ ಕಿರುಕಾದಂಬರಿ (ಅಥವಾ ದೊಡ್ಡ ಸಣ್ಣ ಕತೆ) ಯನ್ನು ಹಿಂತೆಗೆದುಕೊಂಡಿರುವುದನ್ನು ನಾವು ಕಾಣುತ್ತೇವೆ. ಆದರೂ ಅದು ಹೈದರಾಬಾದಿನ ಸ್ತ್ರೀತ್ವವಾದಿಗಳಿಗೆ ಆದರ್ಶಮಯವಾಗಿ ಕಂಡಿದೆ.

ಅಲೆಕ್ಸ್ ಹೋಲ್ಟ್ ಎಂಬ ಬ್ರಿಟನ್ನಿನ ವಿಮರ್ಶಕಿ ಸಹ ಈ ಹೈದರಾಬಾದ್ ಸ್ತ್ರೀತ್ವವಾದಿಗಳಂತೆ ಕೊಲಂತೈ ಕೃತಿಯ ಬಗ್ಗೆ ಅಭಿಮಾನವಿರಿಸಿಕೊಂಡಿದ್ದಾಳೆ. ಆದರೆ ಕೊಲಂತೈ ಸಮಗ್ರ ಕೃತಿಗಳ ಪ್ರಕಾಶನದ ಕಾಲದಲ್ಲಿ ಅದನ್ನು ಹಿಂತೆಗೆದುಕೊಂಡದ್ದು ಸಾಹಿತ್ಯವಾಗಿ ಅದು ಕಳಪೆಯ ಕೃತಿ ಎಂಬ ಕಾರಣದಿಂದಲ್ಲ, ಬದಲಾಗಿ ಆ ಕೃತಿಯ ಧೋರಣೆಯನ್ನು ವಿಮರ್ಶಕರು ತೀವ್ರವಾಗಿ ಅಲ್ಲಗಳೆದದ್ದರಿಂದ ಎಂಬುದನ್ನು ಸ್ಪಷ್ಟಪಡಿಸಿದ್ದಾಳೆ. ಕೃತಿಯಲ್ಲಿನ ತನ್ನ ನಿಲುವನ್ನು ಸ್ವತಃ ಕೊಲಂತೈ ನಿರಾಕರಿಸಿದ್ದಾಗ್ಯೂ ಈಚಿನ ಕೆಲವು ಸ್ತ್ರೀತ್ವವಾದಿಗಳಿಗೆ ಅದು ಅಮೋಘವಾಗಿ ಕಂಡಿದೆ. ನಕಾರಾತ್ಮಕವಾದದ್ದನ್ನು ಶ್ಲಾಘಿಸುವುದು ಅವರ ಅಭ್ಯಾಸವಿರಬಹುದು.

ಈ ಕೃತಿಯನ್ನು ಆಮೂಲಾಗ್ರವಾಗಿ ಪರಿಶೀಲಿಸಿದರೆ ಅದೊಂದು ವಿಕಟವಾದ ಮನೋಭಿಲಾಷೆಯನ್ನು ಪ್ರತಿ

ಬಿಂಬಿಸುವ ಕೃತಿಯೆಂದು ಗೋಚರಿಸುತ್ತದೆ. ಮುಕ್ತ ಲೈಂಗಿಕತೆಯನ್ನುಳಿದು ಅದು ಬೇರಿನ್ನೇನನ್ನೂ ಬೋಧಿಸುವುದಿಲ್ಲ. ಮಹಿಳೆಯ ಬಂಧನ ಸಂಪೂರ್ಣವಾಗಿ ಮಾಯವಾಗಿ ಹೋಗಲು ಸ್ವಚ್ಛಂದ ಲೈಂಗಿಕತೆಯಿಂದ ಪರಿಣಾಮಕಾರಿ ಕೊಡುಗೆ ಇರುತ್ತದೆಂದು ಪುಸ್ತಕದ ಆಶಯ. ಮಹಿಳೆಯ ಸಂದರ್ಭದಲ್ಲಿ ಸಾಮಾಜಿಕ–ಆರ್ಥಿಕ–ಸಾಂಸ್ಕೃತಿಕ ಸನ್ನಿವೇಶಗಳು ಹೇಗೆ ಮತ್ತು ಏಕೆ ಬಂಧನಕ್ಕೆ ಆಗರಗಳಾಗಿವೆಯೆಂಬುದಾಗಲಿ, ಬಂಧನದ ಸ್ವರೂಪವಾಗಲಿ, ಬಿಡುಗಡೆಯು ಕೇವಲ ಲೈಂಗಿಕ ಸ್ವಚ್ಛಂದತೆಯಿಂದ ಹೇಗೆ ಲಭಿಸುತ್ತದೆಂದಾಗಲಿ ಇಲ್ಲಿ ಪ್ರಸ್ತಾಪಕ್ಕೆ ಬಂದಿಲ್ಲ. ಬಹುಶಃ ಹೈದರಾಬಾದಿನ ಸ್ತ್ರೀತ್ವ ಸಂಘದವರಿಗೂ ಆ ಪ್ರಶ್ನೆಗಳು ಪ್ರಸ್ತುತವೆನಿಸಿಲ್ಲದಿರಬಹುದು. ಸ್ವಾತಂತ್ರ್ಯವನ್ನು ಮೊಟಕುಗೊಳಿಸಿರುವ ಅಥವಾ ಪೂರ್ತಿಯಾಗಿ ಪ್ರತಿಬಂಧಿಸಿರುವ ಮೂಲಕಾರಣಗಳೇನೆಂಬುದನ್ನು ಶೋಧಿಸದೆ ಸ್ವಾತಂತ್ರ್ಯವನ್ನು ದೊರಕಿಸಿಕೊಳ್ಳಬೇಕೆಂಬ ಅಭಿಲಾಷೆಯನ್ನು ಮಾತ್ರ ಇಟ್ಟುಕೊಂಡಿರುವವರು ನಿಖರವಾದ ಯಾವ ಸೂತ್ರವನ್ನೂ ಸ್ಫುಟವಾಗಿ ವ್ಯಾಖ್ಯಾನಿಸಲಾಗದೆ ಹೋಗುತ್ತಾರೆ. ಆಗ ತೋರಿಕೆಗೆ ಪ್ರಮುಖವೆಂದು ತೋರುವ, ಆದರೆ ನಿಜವಾಗಿಯೂ ಅಷ್ಟು ಗಣನೀಯವಲ್ಲದ, ಕೆಲವು ಅಂಶಗಳಿಗೆ ಒತ್ತುಕೊಟ್ಟು ವಿಶ್ಲೇಷಣೆಯು ಸಮಗ್ರವಾಯಿತೆಂದು ವಿಜೃಂಭಿಸುತ್ತಾರೆ. ಕೊಲಂತ್ಯೆ ತನ್ನ ರಾಜಕೀಯ ಹೋರಾಟದ ಜೀವನದಲ್ಲಿಕಂಡುಕೊಂಡ ಸತ್ಯವನ್ನು ಅನುಭವಗಳ ಸಮೇತವಾಗಿಬೇಕಾದಷ್ಟು ಲೇಖನಗಳಲ್ಲಿ ಬರೆದಿಟ್ಟಿರುವುದುಂಟು. ಆಕೆಎಂದೂ ಸಾಹಿತಿಯಾಗಿ ಶ್ರೇಷ್ಠತೆಯನ್ನು ಗಳಿಸಿದವಳಲ್ಲ. ಮೇಲಾಗಿ, ಆಕೆಯು ಮಹಿಳಾ ಸ್ವಾತಂತ್ರ್ಯದ ಬಗೆಗೆ ತಾಳಿದ್ದ ಅಭಿಪ್ರಾಯಗಳನ್ನು ಬೇರೆ ಹಲವಾರು ಲೇಖನಗಳಲ್ಲಿ ಹಾಗೂ ಹೋರಾಟಗಳಲ್ಲಿ ವಿಪುಲವಾಗಿ ದಾಖಲಿಸಿದ್ದಾಳೆ. ಹೀಗಿದ್ದೂ ಆಕೆಯ ಒಂದು ಕಳಪೆಯ ಕತೆಗೆ ವಿಶಿಷ್ಟವಾದ ಸ್ಥಾನವನ್ನು ನೀಡಿ ಅದರ ಆಧಾರದ ಮೇಲೆ ಮಹಿಳಾ ಸ್ವಾತಂತ್ರ್ಯದ ಚರ್ಚೆಯನ್ನು ಕೈಗೆತ್ತಿಕೊಂಡಿರುವ ಹೈದರಾಬಾದ್ ಸ್ತ್ರೀತ್ವವಾದಿಗಳ ರೀತಿನೀತಿಗಳು ಆತಂಕವನ್ನು ಹುಟ್ಟಿಸುವಂಥವು.

ಕೊಲಂತ್ಯೆ ಕತೆಯಲ್ಲಿ ಬರುವ ಒಂದು ಪಾತ್ರ ಜೇನ್ಯಾಳದು. ಅವಳು ಮುಕ್ತ ಲೈಂಗಿಕತೆಯ ಪ್ರತಿಪಾದಕಿ ಹಾಗೂ ಅನುಭವಿ. ಅವಳೊಟ್ಟಿಗೆ ಬರುವ ಇನ್ನಿಬ್ಬರು ಮರಿಯಾ ಮತ್ತು ಓಲ್ಗಾ. ಮೂವರೂ ಮೂರು ತಲೆಮಾರಿನವರು ಎನ್ನಬಹುದು. ಅವರ ಜೀವನಕ್ರಮಗಳನ್ನೂ ಲಾಲಸೆಗಳನ್ನೂ ಚಿತ್ರಿಸಹೊರಟಿರುವ ಕೊಲಂತ್ಯೆ ಯಾವ ಮನೋಧರ್ಮದವಳು ಎಂಬುದಕ್ಕೆ ಕತೆಯಲ್ಲಿ ನೇರವಾದ ಯಾವ ಸಾಕ್ಷ್ಯಾಧಾರಗಳೂ ಇಲ್ಲ. ಯಾವುದು ಸರಿ ಮತ್ತು ಯಾವುದು ತಪ್ಪು ಎಂಬುದನ್ನು ಲೇಖಕಿ ಬಿಡಿಸಿ ಹೇಳಿಲ್ಲ. ಬಹುಶಃ ಜೇನ್ಯಾನೇ ಸರಿಯೆಂಬುದು ಅವಳ ನಿಲುವಿರಬಹುದು. ಆದರೆ ಹೈದರಾಬಾದ್ ಸ್ತ್ರೀತ್ವವಾದಿಗಳ ಮುನ್ನುಡಿಯನ್ನು ಆಧರಿಸಿ ಹೇಳುವುದಾದರೆ ಅವರಿಗೆ ಸರಿ–ತಪ್ಪುಗಳ ಕಲ್ಪನೆಯೇ ಅಪ್ರಾಸಂಗಿಕವೆಂದು ತೋರುತ್ತದೆ. ಅವರ ಪ್ರಕಾರ ಸ್ತ್ರೀ–ಪುರುಷ ಸಂಬಂಧಗಳು ಜೇನ್ಯಾ ಅರಸಿದ ರೀತಿಗಿಂತಲೂ ಹೆಚ್ಚು ವೇಗವಾಗಿ ಧಾವಿಸುತ್ತವೆ. ಜೇನ್ಯಾಳ ಲೈಂಗಿಕ ದೃಷ್ಟಿಯ 'ಬೆಳವಣಿಗೆ' ಸಮೂಹ ಲೈಂಗಿಕತೆಯಾಗಿ ಪರಿಣಮಿಸಿದೆ. ಅದು ಮಹಿಳಾ ಸ್ವಾತಂತ್ರ್ಯದ ಇನ್ನೊಂದು ಹೆಜ್ಜೆ ಇರಬಹುದು! ಜೇನ್ಯಾಗೆ ತನ್ನ ಸ್ವಚ್ಛಂದತೆಯಲ್ಲಿ ಯಾವ ಅಳುಕೂ ಇಲ್ಲ. ಏಕೆಂದರೆ, ಅವಳು ಲೈಂಗಿಕತೆಯಲ್ಲಿ ತೊಡಗುವುದು ಯಾಂತ್ರಿಕವಾಗಿ ಮತ್ತು ಕೇವಲ ಸ್ವಯಮಿಚ್ಛೆಯಿಂದ. ಅಂದರೆ, ಸ್ವಯಮಿಚ್ಛೆಯಿಂದ ನಾವೇನು ಮಾಡಿದರೂ ಅದು ಸರಿಯೇ ಆಗಿರಬೇಕೆಂದು ಅವಳ ತೀರ್ಮಾನ. ಸಮೂಹ ಲೈಂಗಿಕತೆಯಲ್ಲೂ ಸ್ವಯಮಿಚ್ಛೆಯ ತುಣುಕು ಸಿಕ್ಕುವಂತಿದ್ದರೆ ಅದನ್ನೂ ಅಂಗೀಕಾರಾರ್ಹವೆಂದೂ ಸ್ವಾತಂತ್ರ್ಯದ ಪರಾಕಾಷ್ಠೆಯೆಂದೂ ನಾವು ನಂಬಬೇಕಾಗುತ್ತದೆ.

ಪುರುಷರು ಎಸಗುವ ಅನ್ಯಾಯ, ಕ್ರೌರ್ಯ, ವಂಚನೆ, ಇತ್ಯಾದಿಗಳನ್ನು ಪ್ರತಿಭಟಿಸಿ ಅವುಗಳ ಜಾಗದಲ್ಲಿ ಪರ್ಯಾಯವಾದೊಂದು ಸಾಮಾಜಿಕ ಮತ್ತು ನೈತಿಕ ಮೌಲ್ಯವನ್ನು ಸ್ಥಾಪಿಸುವುದು ಮಹಿಳಾ ಸ್ವಾತಂತ್ರ್ಯಕ್ಕೆ ಪೂರಕವಾದ ಒಂದು ಪ್ರಕ್ರಿಯೆ. ಈ ವಿಮೋಚನೆಗೆ ಬದಲಾಗಿ ಸಾಮಾಜಿಕ ನ್ಯೂನತೆಗಳತ್ತ ಸಿಟ್ಟನ್ನು ಎತ್ತಿತೋರಿ ದುರುಳ ಪುರುಷರು ಎಸಗುವ ಎಲ್ಲವನ್ನೂ ಮಹಿಳೆಯರೂ ಎಸಗುವುದರಲ್ಲಿ ಸ್ವಾತಂತ್ರ್ಯದ ಉದ್ದೇಶವನ್ನು ಕಂಡುಕೊಂಡರೆ ಹೋರಾಟವು ವಿಕೃತವಾಗುವುದರಲ್ಲಿ ಸಂದೇಹವಿಲ್ಲ. ಕೊಲಂತ್ಯೆ ಬರೆದಿರುವ ಕತೆಯನ್ನು ಸಮರ್ಥಿಸುವಾಗ ಹೀಗೆನ್ನಬಹುದು: ಪುರುಷರ ಸ್ವೇಚ್ಛಾಚಾರಗಳನ್ನು ಚಿತ್ರಿಸುವ ಕತೆಗಳಿಲ್ಲವೆ? ಹಾಗಿದ್ದರೆ, ಸಾಹಿತಿಯು ಮಹಿಳೆಯರ ಅಂಥದೇ ಸ್ವೇಚ್ಛಾಚಾರವನ್ನೇಕೆ

ಚಿತ್ರಿಸಬಾರದು?—ಈ ಪ್ರಶ್ನೆ ಸಮಂಜಸವಾಗಿದೆ ಮತ್ತು ಉತ್ತರವೂ ಸರಳ. ನೀವೇನು ಬೇಕಾದರದ ಚಿತ್ರಿಸಿ, ಆದರೆ ಅದೇ ಆದರ್ಶ ಸ್ವಾತಂತ್ರ್ಯವೆಂದು ಬಗೆಯಲಾಗುವುದಿಲ್ಲ, ಅಷ್ಟೆ. ಪುರುಷಪರವಾದ ಹಾಗೂ ಸಾಮಾಜಿಕ ಸಮಾನತೆಯ ಮೌಲ್ಯರಹಿತವಾದ ಸಾಹಿತ್ಯ ಕೃತಿಗೆ ಉತ್ತರ ಅದರ ತಿರಸ್ಕಾರವೇ ಹೊರತು ಅಂಥದೇ ಮೌಲ್ಯ ರಹಿತವಾದ ಇನ್ನೊಂದು ಸ್ತ್ರೀಪರವಾದ ಸಾಹಿತ್ಯ ಕೃತಿಯಲ್ಲ. ಈ ದೃಷ್ಟಿಯಿಂದ ಕೊಲಂತೈ ಅವರ "ಮೂರು ತರಹಗಳು" ಕೃತಿಯನ್ನು ಆರಾಧಿಸಹೊರಟಿರುವ ಸ್ತ್ರೀತ್ವವಾದಿಗಳ ಮಾರ್ಗ ಅಬದ್ಧವಾಗಿದೆ. ಅದು ಸ್ವಚ್ಛಂದತೆಯನ್ನು ವೈಭವಿಸಿ ಸಾಮಾಜಿಕ ಅವಶ್ಯಕತೆಗಳನ್ನು ತೃಣೀಕರಿಸುತ್ತದೆ. ಮಹಿಳಾ ಸಮಸ್ಯೆಗಳ ನಿಜವಾದ ಆಯಾಮಗಳನ್ನು ಗುರುತಿಸದೆ ಅದನ್ನು ಬೇಕಾಬಿಟ್ಟಿಯಾಗಿ ಮತ್ತು ಅತಾರ್ಕಿಕವಾಗಿ ವಿಮರ್ಶಿಸುತ್ತದೆ. ಕೊಲಂತೈ ಕತೆಯ ಅಂತಿಮ ವಿಮರ್ಶೆಯೂ ಅದೇ ಆಗಿದೆ.

ಈ ಹಿನ್ನೆಲೆಯಲ್ಲಿ ರಂಗನಾಯಕಮ್ಮನವರು ಸ್ತ್ರೀತ್ವವಾದವನ್ನು ಕುರಿತು ಹೇಳಿರುವ ಮಾತುಗಳನ್ನು ಉಲ್ಲೇಖಿಸಬಹುದಾಗಿದೆ. ಬಹುಮಟ್ಟಿಗೆ ಎಲ್ಲರೂ ಅದನ್ನು ಅರ್ಥೈಸುವುದು ಸ್ತ್ರೀ–ಪುರುಷ ಸಮಾನತ್ವವನ್ನು ಬಯಸುವುದು ಎಂದೇ. ಆದರೆ ಅಭಿಪ್ರಾಯ ಮತ್ತು ಹೋರಾಟದ ಮಾರ್ಗದ ವೈವಿಧ್ಯ ಬರುವುದು 'ಸಮಾನತೆ' ಎಂದರೇನು ಎಂಬ ಪ್ರಶ್ನೆಯ ಉತ್ತರಗಳಲ್ಲಿ. ಕೆಲವರು ಭಾವಿಸಿರುವಂತೆ ಸ್ತ್ರೀತ್ವವಾದಿಗಳೆಂದರೆ ಕೇವಲ ಸ್ತ್ರೀಯರೇ ಆಗಬೇಕಾಗಿಲ್ಲ. (ದಲಿತ ಪ್ರಜ್ಞೆ, ಮಣ್ಣಿನ ವಾಸನೆ, ಇತ್ಯಾದಿ ನಾಮಾಂಕಿತ ಸಾಹಿತ್ಯಕ ಅತಳಗೋಲುಗಳ ಬಗೆಗಿನ ವ್ಯಾಪಕ ಚರ್ಚೆ ನಡೆದಿರುವುದನ್ನಿಲ್ಲಿ ಸ್ಮರಿಸಬಹುದು). ಮಹಿಳಾ ಸಮಸ್ಯೆಗಳ ಪರವಾಗಿ ಪುರುಷರು ಹೋರಾಡಿದರೆ ಅವರೂ ಸ್ತ್ರೀತ್ವವಾದಿಗಳೆನಿಸುತ್ತಾರೆ. ಇದರ ಇನ್ನೊಂದು ಮಥಿತಾರ್ಥ ಇದು: ಮಹಿಳಾ ಸಮಸ್ಯೆಗಳ ಬಗ್ಗೆ ಮಹಿಳೆಯು ನೀಡುವ ವಿಶ್ಲೇಷಣೆ ಮಾತ್ರ ಸರಿಯಾಗಿರಬೇಕೆಂಬ ನಿಯಮವೇನೂ ಇಲ್ಲ. ಅವರ ಬಾಧೆಗಳನ್ನು ಅವರು ಮಾತ್ರವೇ ತಿಳಿಯಬಲ್ಲರೆಂಬುದು ಒಂದು ಮಿಥ್ಯೆ. ಹಾಗೆ ನೋಡಿದರೆ ಸೊಸೆಯರನ್ನು ಬೆಂಕಿಹಚ್ಚಿ ಸಾಯಿಸುವ ಅತ್ತೆಯರೂ ಮಹಿಳೆಯರೇ ಅಲ್ಲವೇ? ಅವರನ್ನು ಗಂಡಂದಿರು ಅಥವಾ ಮಾವಂದಿರು ಮಾತ್ರವೇ ಸಾಯಿಸುತ್ತಾರೇನು? ವೇಶ್ಯಾಗೃಹಗಳನ್ನು ನಡೆಸುತ್ತಿರುವ ಮಹಿಳೆಯರಿಲ್ಲವೇ? ಅಂದರೆ, ಮಹಿಳಾ ಪ್ರಜ್ಞೆಯನ್ನು ಅತ್ಯಂತ ಸೀಮಿತಾರ್ಥದಲ್ಲಿ ಮಹಿಳೆಯ ಅನುಭವಕ್ಕೆ ಮಾತ್ರ ಬರುವಂಥದ್ದೆಂದು ಹೇಳಲಾಗದು. ಜೊತೆಗೆ, ಮಹಿಳೆಯರೆಲ್ಲರ ಪ್ರಜ್ಞಾನುಭವಗಳು ಏಕಪ್ರಕಾರವಾಗಿಲ್ಲ. ಆದ್ದರಿಂದ, ಮಹಿಳಾ ಸಮಸ್ಯೆಯನ್ನು ತಪ್ಪಾಗಿ ಪ್ರತಿಪಾದಿಸುವುದು ಸ್ತ್ರೀಯರಿಂದಲೂ ಸಾಧ್ಯ ಮತ್ತು ಅದರ ಪರಿಣಾಮ ಸ್ತ್ರೀಯರ (ಮತ್ತು ತನ್ಮೂಲಕ ಸಮಾಜದ) ಹಿತಕ್ಕೆ ವಿರೋಧವಾದದ್ದೂ ಆಗುತ್ತದೆ. ಕೊಲಂತೈ ಮಹಿಳೆಯಾಗಿ ಮಹಿಳೆಯ ಸಮಸ್ಯೆಯನ್ನು ಯದ್ವಾತದ್ವಾ ವ್ಯಾಖ್ಯಾನಿಸಲು ಸಾಧ್ಯ; ಲೆನಿನ್ ಪುರುಷನಾಗಿ ಅದನ್ನು ನಿಷ್ಪಕ್ಷವಾಗಿ ತಿಳಿಯಹೇಳಲು ಸಾಧ್ಯ. ಇದರ ವ್ಯತಿರೇಕವೂ ಅಷ್ಟೇ ಸಾಧ್ಯವಾದದ್ದು. ಯಾರು

● ಡಾ|| ಜಿ. ರಾಮಕೃಷ್ಣ

ವಿಶ್ಲೇಷಿಸುತ್ತಿದ್ದಾರೆ ಎಂಬುದಕ್ಕಿಂತ ಏನು ವಿಶ್ಲೇಷಣೆ ನೀಡಲಾಗುತ್ತಿದೆ ಎನ್ನುವುದು ಹೆಚ್ಚು ಗ್ರಾಹ್ಯ. ವರ್ಗ ಸಂಬಂಧವಾದ ತರ್ಕವನ್ನು ಅವಲಂಬಿಸದಿದ್ದರೆ ಯಾವ ವಿಷಯವನ್ನೇ ಆದರೂ ಅಪಾರ್ಥ ಮಾಡಿಕೊಳ್ಳುವುದು ಬಹುಮಟ್ಟಿಗೆ ಅನಿವಾರ್ಯವಾಗುತ್ತದೆಂಬುದಕ್ಕೆ ಇದೊಂದು ನಿದರ್ಶನವಾಗಬಹುದು. ಸಮಾನತ್ವ ಮತ್ತು ಆತ್ಮಗೌರವಗಳನ್ನು ಏಕಕಾಲದಲ್ಲಿ ಮತ್ತು ಏಕತ್ರ ಸಂಯೋಜಿಸಿದಾಗ ಬರುವ ಸಮಾನತೆಯ ಕಲ್ಪನೆಯ ಪರಿಧಿಯಲ್ಲೇ ಸ್ತ್ರೀ–ಪುರುಷರ ಸಮಾನತೆಯ ಪ್ರಶ್ನೆ ಇತ್ಯರ್ಥವಾಗಬೇಕು.

ಇಂದಿನದಕ್ಕಿಂತಲೂ ಹೆಚ್ಚು ಪ್ರತಿಗಾಮಿತ್ವದಿಂದ ಕೂಡಿದ ಚಿಂತನೆ ಮತ್ತು ವ್ಯವಸ್ಥೆಗಳತ್ತ ಹೋಗುವುದರ ಬದಲು ಇರುವಲ್ಲೇ ಇರುವುದು ಸಹ ಪುರೋಗಾಮಿತ್ವದ ಚಿಹ್ನೆ ಎನಿಸಿಕೊಳ್ಳುತ್ತದೆ. ಸಮಾನತೆಯ ಪ್ರಶ್ನೆಯ ಸಂದರ್ಭದಲ್ಲಿ ಇದು ಅತಿಸೂಕ್ಷ್ಮವಾದ ಮತ್ತು ಉಚಿತವಾದ ಮಾತು. ಶಾ ಬಾನೋ ಪ್ರಕರಣವು ಇದಕ್ಕೆ ಜೀವಂತ ಸಾಕ್ಷಿ. ಕೊಲಂತೈ ಪುಸ್ತಕದ ಅಭಿಮಾನಿಗಳೂ ಆ ಸಾಲಿಗೆ ಸೇರುವವರೇ ಆಗಿರುತ್ತಾರೆ.

"ಮೂರು ತರಹದವರು" ಕೃತಿಯ ಸಾರಾಂಶವನ್ನು ಸ್ಥಳಾಭಾವದಿಂದಾಗಿ ಇಲ್ಲಿ ಕೊಡಲಾಗುತ್ತಿಲ್ಲ. ಬಹಳ ಸಂಕ್ಷಿಪ್ತವಾಗಿ ಹೇಳಬೇಕೆಂದರೆ ಅಲ್ಲಿಯ ಮೂರು ಪಾತ್ರ

32ನೇ ಪುಟಕ್ಕೆ

## ಗಲ್ಲಿಯೊಳಗಿನ ಒಂದು ಕತೆ

ಸೂಜಾ ಒಂದು ಹಳೆಯ ಊರು. ಆ ತಣ್ಣನೆಯ ರಾತ್ರಿಯಲ್ಲಿ ಊರೆಲ್ಲ ಮಲಗಿತ್ತು. ಆ ಊರಿನ ಈಶಾನ್ಯದ ಮೂಲೆಯ ಗಲ್ಲಿಯೊಳಗೆ ಕಿಟಕಿಯೊಂದರಲ್ಲಿ ಬೆಳಕಿತ್ತು, ಬೆಳಕಿನಡಿಯಲ್ಲಿ ಯುವತಿಯೊಬ್ಬಳು ಏನೋ ಗಾಢವಾಗಿ ಯೋಚಿಸುತ್ತಾ ಕುಳಿತಿದ್ದಳು. ಸುಂದರಿಯಾದ ಅವಳ ಕಣ್ಣುಗಳು ದುಃಖದ ಮಡುವಾಗಿದ್ದವು. ಅವಳ ನೆರೆ ಹೊರೆಯವರಿಗೆಲ್ಲಾ ಅವಳು ಅಪರಿಚಿತಳಾಗೆ ಇದ್ದಳು. ಅಂಚೆಯಾಳಿಗ ಮಾತ್ರ ಅವಳ ಹೆಸರು ಸೂ ವೆಂಕ್ಸಿಯ ಎಂದು, ಅವಳೊಂದು ಹತ್ತಿ ಗಿರಣಿಯಲ್ಲಿ ಕೆಲಸ ಮಾಡು ತ್ತಾಳೆಂದು ತಿಳಿದಿತ್ತು. ಅದಕ್ಕೆ ಕಾರಣ, ಆಗಾಗ್ಗೆ ಅವನು ಅವಳಿಗೆ ಸುಂದರ ಬರಹದ ಪತ್ರಗಳನ್ನು ತರುತ್ತಿದ್ದ; ಆಕೆ ಬೇಸರದಿಂದ ಅವನೆದುರಿಗೇ ಹರಿಯುತ್ತಿದ್ದಳು.

ಸೂ ಮುಂದೆ ಗಣಿತದ ಪುಸ್ತಕವಿತ್ತು. ಅವಳು ಏನೂ ಓದಲಿಕ್ಕಾಗದಷ್ಟು ದುಃಖಿಯಾಗಿದ್ದಳು. ಈಚೀಚೆಗೆ ಅವಳನ್ನು ಈ ಕಡು ದುಃಖ ಸದಾ ಆವರಿಸಿರುತ್ತಿತ್ತು. ಹಳೆಯ ಹಾಳು ನೆನಪುಗಳು ಕಾಡುತ್ತಿದ್ದವು, ಹಾಗೇ ಸದಾ ಕಣ್ಣಲ್ಲಿ ನೀರು ತುಂಬಿಬಿಡುತ್ತಿತ್ತು.

ಆ ತಣ್ಣನೆಯ ರಾತ್ರಿಯಲ್ಲಿ ಹೆಂಗಸರ ಗುಂಪೊಂದು ಬೀದಿಯಲ್ಲಿ, ಗಲ್ಲಿಗಳ, ಮನೆಗಳ ತಿರುವಿನಲ್ಲಿ ಮತ್ತು ಚಾಂಗ್‌ಮಿನ್ ಹೋಟೆಲಿನ ಹತ್ತಿರ ಗಿರಾಕಿಗಳನ್ನು ಹುಡುಕುತ್ತಿದ್ದರು. ಪಠೂಲಿಗಳು ಮೇಲೆದ್ದು ಕಾಣುವಂತೆ ಕೈ ಕಟ್ಟಿಕೊಂಡು ಹತ್ತಿರ ಹೋಗುವ ಗಂಡಸರಿಗೆ ದುಂಬಾಲು ಬೀಳುತ್ತಿದ್ದರು. ಯಾರಾದರು ಅಸಹ್ಯದಿಂದ ಬೈದರೆ ಜೋರಾಗಿ ನಗುತ್ತ ಅವಹೇಳನ ಮಾಡುತ್ತಿದ್ದರು. ಇಂತಹವರಲ್ಲಿ ಒಬ್ಬಳಾಗಿದ್ದಳು ಸೂ. ಆ ದಿನಗಳಲ್ಲಿ ಅವಳನ್ನು 'ನಾಲ್ಕನೆಯ ತಂಗಿ' ಎಂದು ಮ್ಯಾಡಂ ಕರೆ ಯುತ್ತಿದ್ದಳು, ಆಗ ಅವಳಿಗೆ ಹದಿನೇಳು ವರ್ಷ ಮಾತ್ರ. ಪೌಡರ್ ಲೇಪಿಸಿ ಇನ್ನು ಪೇಲವವಾಗಿದ್ದಳು, ಆ ದೀಪಗಳ ಅಡಿಯಲ್ಲಿ.

## ಒಂದು ಚೀನಿ ಕತೆ

ಇದು ಹಳೇಯ ಕತೆ. ಬೇರೆಯೇ ಲೋಕದ್ದು ಆದರೂ ನೆನಪಾದಾಗಲೆಲ್ಲಾ ಆ ದಿನಗಳನ್ನು ನೆನೆದು ನಡುಗು ತ್ತಿದ್ದಳು.

1952ರಲ್ಲಿ ಜನರ ಸರ್ಕಾರ ಎಲ್ಲ ವೇಶ್ಯೆಯರನ್ನು ತರಬೇತಿ ಶಿಬಿರಗಳಿಗೆ ತಂದು ಅವರನ್ನು ಕಾಯಿಲೆಗಳಿಂದ ಮುಕ್ತಗೊಳಿಸಿ ಉದ್ಯೋಗಗಳಲ್ಲಿ ತೊಡಗಿಸಿದ್ದರು. ಸೂ ಜೀವನದಲ್ಲಿ ಇದು ಅಮೂಲ್ಯವಾದ ಅನುಭವ. ಅವಳಿಗೆ ತನ್ನ ತಾಯಿ ಯಾರೆಂದಾಗಲೀ, ತಾಯಿಯ ಮಮತೆಯಾ ಗಲೀ ನೆನಪಿಲ್ಲ. ಆದರೂ ಜೀವನಲ್ಲಿ ತಲೆಯೆತ್ತಿ ಎಲ್ಲರಂತೆ ಗೌರವಾನ್ವಿತಳಾಗಿ ಬದುಕುವ ಅವಕಾಶ ಒದಗಿ ಬಂದಿರು ವುದೆಂಬುದೇ ಸಂತಸದ ವಿಷಯವಾಗಿತ್ತು. ಅವಳ ಚುರುಕು ತನ ಗಮನಿಸಿದ ಮೇಲಧಿಕಾರಿ ಅವಳನ್ನು ಹತ್ತಿಗಿರಣಿಯ ನೇಯುವ ಕೆಲಸದಿಂದ ವಿದ್ಯುತ್ ರಿಪೇರಿ ವಿಭಾಗಗಕ್ಕೆ ಕಳಿಸಿದ. ಅವಳ ಜೀವನ ಬೇರೆ ತಿರುವು ಪಡೆಯಿತು. ಆದರೆ–ಗೌರವ ತಾನಾಗೇ ಬಂದವು. ಆದರೂ ಯುವಕರ ಇರಿಯುವ ನೋಟಗಳು ಅವಳನ್ನು ಭಯಪಡಿಸುತ್ತಿದ್ದವು.

ಆದರೂ ಪ್ರೀತಿಯ ಸೊಗಸು ಹಾಗು ಕುಟುಂಬ ಜೀವನ ತರುವ ಸುಖವಾದರೂ ಎಂತಹುದು? ಇದನ್ನು ಯೋಚಿಸುವ ಧೈರ್ಯವೇ ಸೂಳಿಗೆ ಬರಲಿಲ್ಲ. ದಿನಕಳೆದಂತೆ ಒಬ್ಬಂಟಿ ಯಾದಳು, ದುಃಖ ಉಕ್ಕಿದಾಗಲೆಲ್ಲಾ ಕಣ್ಣೀರಿಗೆ ದಿಂಬೇ ಸಂಗಾತಿಯಾಗುತ್ತಿತ್ತು. ಎಲ್ಲವನ್ನೂ ಮರೆತು ಓದಿನಲ್ಲಿ ಮನಸ್ಸು ತೊಡಗಿಸುತ್ತಿದ್ದಳು. ಯುವಕರ ಕಾಗದಗಳನ್ನು ಒಡೆದು ನೋಡದೆ ಹರಿದೆಸೆಯುತ್ತಿದ್ದಳು. ಅವರ ಪ್ರೀತಿ ಪ್ರೇಮಗಳೆಲ್ಲ ತಾನೊಬ್ಬ ಸೂಳೆಯಾಗಿದ್ದವಳು ಎಂದು ತಿಳಿದಾಗ ಏನಾಗಬಹುದೆಂಬ ಅರಿವಿದ್ದ ಅವಳ ಮನಸ್ಸು ಗಟ್ಟಿಯಾಗುತ್ತಿತ್ತು. ಕೆಲಸ, ಓದು ಮಾತ್ರ ಸಾಕೆಂದು ನಿರ್ಧರಿಸಿದಳು. ಆದರೂ ಪುಸ್ತಕ ತೆಗೆದು ಕುಳಿತಾಗೆಲ್ಲ ಹುಡುಗರ ಪ್ರೇಮ ಪತ್ರಗಳು ಕಣ್ಮುಂದೆ ಬರುತ್ತಿದ್ದವು. ಕಿಟಕಿಯಿಂದ ತಂಗಾಳಿ ಬೀಸಿದಾಗ ಹಾಯೆನಿಸಿತು.

ಅಂತದೇ ನೆನಪು ನುಗ್ಗಿ ಬಂತು. ಅದು ಜೊತೆಯಲ್ಲಿ ಕೆಲಸ ಮಾಡುವ ಜಾಂಗ್‌ಜುನ್‌ದು. ಆತ ಪದವೀಧರ ಯುವಕ. ಒಟ್ಟಿಗೇ ಕೆಲಸ ಮಾಡುವಾಗ, ಮಾತಾಡುವಾಗ ಆತನ ಮುಖದಲ್ಲಿ ಸದಾ ಮುಗುಳ್ನಗೆ ಇರುತ್ತಿತ್ತು. ಮಾತಾಡಲೆಂದು ಓಡಿ ಬರುತ್ತಿದ್ದ 'ಸೂ'ವನ್ನು ನೋಡಿ ಮುಖ ಕೆಂಪಾಗಿಸಿಕೊಂಡು ಏನೂ ಹೇಳದೆ ಹೋಗಿಬಿಡುತ್ತಿದ್ದ. ವಾಚಾಳಿಯಾದ ಆತನ ಮೌನ ಇವಳಿಗೆ ಆಶ್ಚರ್ಯವಾಗಿತ್ತು. ಗಣಿತ ಹೇಳಿ ಕೊಡಲು ಒಪ್ಪಿದ್ದ. ಆದರೂ ಅವನ ವರ್ತನೆಯನ್ನು ಅವಳು ಅನುಮಾನದಿಂದಲೇ ನೋಡುತ್ತಿದ್ದಳು. ಜುನ್ ನೆನಪಿನೊಡನೆ ಅವಳ ಗಟ್ಟಿ ಮನಸ್ಸು ಮುರಿದಿತ್ತು. ಬೇರೆ ಹುಡುಗರನ್ನು, ಪತ್ರಗಳನ್ನು ನಿರ್ಲಕ್ಷಿಸಿದ್ದರೂ ಜೂನ್‌ನ ಮುಗ್ಧ ನೋಟ ಅವಳನ್ನು ಅಲ್ಲಾಡಿಸುತ್ತಿತ್ತು. ಅವನ ನೆನಪು ಅವಳ ಹೃದಯ ಬಿರಿಯುವಷ್ಟು ಮುದ ಕೊಡುತ್ತಿತ್ತು. ಒಮ್ಮೊಮ್ಮೆ ತನ್ನ ಗತ ಜೀವನ ನೆನಪಾದಾಗ ವಿಪರೀತ ಭಯ ಪಡುತ್ತಿದ್ದಳು.

ಅಂದು ಮಳೆ ಬರುತ್ತಿತ್ತು. ಜುನ್ ಬಂದು ಎದುರಿಗೆ ಮೌನವಾಗಿ ಕುಳಿತ ಅವಳನ್ನೇ ದಿಟ್ಟಿಸುತ್ತಿದ್ದ. ಸೂ ಸುಮ್ಮನೆ ಕೂತದ್ದನ್ನು ನೋಡಿ-"ಬಾ ಸ್ವಲ್ಪ ಓದೋಣ. ಯಾಕೆ ಸುಮ್ಮನೆ ಕಾಲ ಕಳೆಯೋದು" ಎಂದು ಪುಸ್ತಕ ತೆಗೆದ. ಆವಳಿಗೆ ಅವನಿಗಿಂತ ಮಿಗಿಲಾದ ಓದು ಇರಲಿಲ್ಲ, ಅವನು ಅವಳಿಗೆ ಪಾಠ ವಿವರಿಸುವಾಗೆಲ್ಲಾ ಖುಷಿ ಕೊಡುವ ಉದಾಹರಣೆಗಳನ್ನು ಕೊಡುತ್ತಿದ್ದ. ಅವನಿಗೂ ಅಷ್ಟೆ, ಸೂ ಜೊತೆಯಲ್ಲಿದ್ದರೆ ಅವನ ಬುದ್ಧಿಮತ್ತೆ ಚುರುಕಾಗಿ ಓಡುತ್ತಿತ್ತು. ಒಮ್ಮೊಮ್ಮೆ ಒಬ್ಬರೇ ಕೂತು ಗಂಟೆಗಟ್ಟಲೆ ಓದುತ್ತಿದ್ದರು. ಸೂ ಗೆ ಬೇಜಾರಾಗಿ ಜೂನ ಹತ್ತಿರ ಬಂದರೆ ಓದಲು ತೊಂದರೆ ಮಾಡಬಾರದೆಂದು ಗದರುತ್ತಿದ್ದ. ಕೊನೆಗೆ ಸೂ ಒಂದು ಸೇಬು ತಂದು ಜೂನ್ ಮುಂದಿಟ್ಟು ಓದಲು ಕೂತಳು. ಸೇಬು ನೋಡಿದ ಜೂನ್ ಚಾಕು ಬೇಕೆಂದು ಅವಳ ಜೇಬುಗಳನ್ನು ತಡಕಲು ಶುರು ಮಾಡಿದಾಗ ಅವರ ಅಂದಿನ ಓದು ಕೊನೆಗೊಂಡಿತು. ಮಾತಿಗೆ ಮೊದಲಾದರೆ ಜುನ್ ಯಾವಾಗಲೂ ಭವಿಷ್ಯದಲ್ಲೇ ಇರುತ್ತಿದ್ದ. ಇಬ್ಬರೂ ಒಟ್ಟಿಗೆ ಕೆಲಸ ಮಾಡಿ, ಮನೆಗೆ ಒಟ್ಟಿಗೇ ಹೋಗಿ, ರಜಾದಿನಗಳಂದು ಮಕ್ಕಳನ್ನು ಆಚೆ ಕರೆದುಕೊಂಡು ಹೋದಂತೆ ಕನಸಿನ ಮೆಟ್ಟಲು ಹತ್ತಿಸುತ್ತಿದ್ದ. ಸೂ ಅವನ ಪ್ರೀತಿಯ ಮಾತುಗಳಲ್ಲಿ ತೇಲಿ ಹೋಗುತ್ತಿದ್ದಳು.

ಮಾತು ಸಾಕಾದಾಗ ಇಬ್ಬರೂ ಕೈ ಹಿಡಿದು ವಾಕಿಂಗ್ ಹೋಗುತ್ತಿದ್ದರು. ದಣಿವಾಗುವವರೆಗೆ ನಡೆದು ಹಿಂತಿರುಗುತ್ತಿದ್ದರು. ಜುನ್ ಪ್ರತಿ ದಿನ ಸೂ ಮನೆಗೆ ಬರುತ್ತಿದ್ದ. ಬಿಡುವಿಲ್ಲದ ದಿನ ಮಲಗುವ ಮುನ್ನ ಬಂದು "ನಾಳೆ ಬರುತ್ತೇನೆ, ಸುಖ ನಿದ್ದೆ ಮಾಡು" ಎಂದು ಹೇಳಿ ಹೋಗುತ್ತಿದ್ದ.

ಬದುಕಿನಲ್ಲಿ ಆಸೆಗಳನ್ನೆಲ್ಲ ತೊರೆದಿದ್ದ ಸೂಗೆ ಜುನ್ ಆಸರೆಯಾಗಿ ಬಂದಿದ್ದ. ಸಿಕ್ಕಿದ ಒಂದು ಆಸರೆಯನ್ನು ಬಲವಾಗಿ ಹಿಡಿದಿದ್ದಳು. ತನ್ನ ಪ್ರೀತಿಯ ಬದುಕಿನ ಆಶಾಕಿರಣವಾದ ಜುನ್‌ನನ್ನು ಕಳೆದುಕೊಳ್ಳುವ ಇಷ್ಟ ಅವಳಿಗಿರಲಿಲ್ಲ. ಆದರೂ ಒಮ್ಮೊಮ್ಮೆ ರಾತ್ರಿಯ ನೀರವತೆಯಲ್ಲಿ ಅವಳ ಗತ ಜೀವನ ನೆನಪಿಗೆ ಬಂದಾಗ ಜುನ್

ಮೂಲ — ಲು ವೆಂಕ್ಸು

ಕನ್ನಡಕ್ಕೆ — ಸಂಪಿಗೆ ಪುಷ್ಪ

ಅವಳನ್ನು ತೊರೆದಂತೆ, ಅವಳನ್ನು ಖಂಡಿಸಿದಂತೆ ಕನಸುಗಳು ಬಿದ್ದಾಗ ಬೆವೆತು ಬಸವಳಿಯುತ್ತಿದ್ದಳು; ಅತೀವ ಸಂಕಟಪಡುತ್ತಿದ್ದಳು, ನಿದ್ದೆಯಿಲ್ಲದೆ ಹೊರಳಾಡುವಾಗೆಲ್ಲಾ ಜುನ್‌ಗೆ ತನ್ನ ಗತ ಜೀವನ ತಿಳಿದರೆ ಅವನ ಪ್ರತಿಕ್ರಿಯೆ ಹೇಗಾಗಬಹುದು, ತಿಳಿಸದೆ ಹಾಗೇ ಅವನನ್ನು ಉಳಿಸಿಕೊಂಡರೆ ಹೇಗೆಂಬ ಊಹಾಪೋಹಗಳಲ್ಲಿ ಒದ್ದಾಡುತ್ತಿದ್ದಳು. ಅವಳಿಗೆ ಜುನ್ ಅವಶ್ಯವಾಗಿದ್ದ, ಅವನ ಪ್ರೇಮ ಅತ್ಯವಶ್ಯವಾಗಿತ್ತು.

ಒಂದು ರಜಾ ದಿನ ಮುಂಜಾನೆ ಸೂ ಜುನ್‌ನ ಕೈ ಹಿಡಿದು ಸೂಜಾ ಪಟ್ಟಣ ಸುತ್ತಾಡಲು ಹೊರಟಳು. ಬಿಳಿ ಹೂಗಳಿದ್ದ, ಕೆನೆ ಬಣ್ಣದ ಸಿಲ್ಕಿನ ಬಟ್ಟೆ ತೊಟ್ಟು ಅವಳು ತುಂಬಾ ಚೆನ್ನಾಗಿ ಕಾಣುತ್ತಿದ್ದಳು. ಅವಳ ಉದ್ದ ಜಡೆ ಅವಳ ನಿಲುವನ್ನು ಎತ್ತರಗೊಳಿಸಿತ್ತು. ಕೈಯಲ್ಲೊಂದು ಹಳದಿ ಬ್ಯಾಗ್ ಹಿಡಿದಿದ್ದಳು. ಅವರಿಬ್ಬರ ಹೆಜ್ಜೆಗಳು ಒಪ್ಪವಾಗಿ ಸದ್ದು ಮಾಡುತ್ತಿದ್ದವು. ಸೂನ ಕಣ್ಣುಗಳು ತಿಳಿನೀರಿನಲ್ಲಿ ಬಿದ್ದ ಎಣ್ಣೆಯ ಮಣಿಯಂತೆ ಹೊಳೆಯುತ್ತಿದ್ದವು. ಜುನ್‌ನ ಸಹವಾಸ ಅವಳಿಗೆ ಹಿತವಾಗಿತ್ತು. ಯಾವಾಗಲೂ ಹೀಗೆ ಇದ್ದರೆ.... ಎಂದು ಬಯಸುತ್ತಿದ್ದಳು.

ಅಲ್ಲೊಂದು ಕಟ್ಟಡ ಕಂಡುಬಂತು. ಸೂ ಅದರ ಮೇಲೆ ಹೋಗೋಣ ಎಂದಳು. ಜುನ್ ಅವಳ ಕೈ ಹಿಡಿದು ಅಲ್ಲೇ ಬಳಿಯಿದ್ದ ಬೆಟ್ಟದ ಕಡೆಗೆ ಒಯ್ದ.

"ನನ್ನ ಬಗ್ಗೆ ನಿನಗೆ ಏನನಿಸುತ್ತದೆ ಹೇಳು", ಜುನ್ ಕೇಳಿದ.

"ಏನು ಹೇಳಲಿ? ನನಗೆ ಇನ್ನೆಂದಿಗೂ ನಿನ್ನಂತಹವನು ಸಿಗಲಾರ" ಎಂದಳು. ಅವನಿಗೆ ಮೇರೆ ಮೀರಿದ ಸಂತೋಷ ವಾಯಿತು. "ಸೂ ನಾವು ಮದುವೆ ಆಗೋಣ" ಎಂದ. ತಕ್ಷಣವೇ ಸೂಗೆ ಸಂತೋಷ, ಭಯ ಒಟ್ಟಿಗೇ ಆಯಿತು. 'ಮುಂದೆ ಹೋಗೋಣ ನಡಿ' ಎಂದಳು.

"ಸೂ, ಈ ಜೀವನ ಚಿಕ್ಕದು ಹಾಗೂ ದೊಡ್ಡದು. ಇಬ್ಬರೂ ಒಟ್ಟಿಗೆ ಕೂಡಿ ಈ ಹಾದಿಯಲ್ಲಿ ನಡೆಯೋಣ. ಒಬ್ಬರಿಗೆ ಸಾಕಾದಾಗ ಇನ್ನೊಬ್ಬರು ಆಸರೆಯಾಗಿ ಜೀವನ ನಡೆಸೋಣ. ಆಗ ನಾವು ಹತ್ತಲಾರದ ಬೆಟ್ಟ ವಿರಲ್ಲ, ನಾವು ದಾಟದ ನದಿಯಿರಲ್ಲ." ಅವನ ಭಾವುಕ ಮಾತುಗಳನ್ನು ಕೇಳಿದ ಸೂ ಗೆ ಕಣ್ಣಲ್ಲಿ ನೀರು ತುಂಬಿತು. ಜುನ್‌ನಂತೆ ಜೀವನವಿಡೀ ಪಕ್ಕದಲ್ಲಿ ಒಬ್ಬನಿದ್ದರೆ.... ಅದೆಂತಹ ಸುಂದರ ಕನಸು....ಸುಂದರ ಚಿತ್ರ! ಅದೇ ಕ್ಷಣ, ಅವನಿಗೆ ನನ್ನ ಗತ ಜೀವನ ತಿಳಿದರೆ!....ಎನಿಸಿದಾಗ ಅವಳ ಮುಖ ತಗ್ಗಿತು, ಅವಮಾನದಿಂದ ಕುಗ್ಗಿದಳು. 'ಹೋಗೋಣನಡಿ' ಎಂದಳು.

ಇನ್ನೂ ಮುಂದೆ ಹೋದಾಗ ಮರಗಳಡಿಯಲ್ಲಿ ಒಬ್ಬ ಮನುಷ್ಯ ಕುಳಿತಿದ್ದನು. ಅವನ ಬೆನ್ನು ಇವರಿಗೆದುರಾ ಗಿತ್ತು. ಸೂನ ಬೂಟಿನ ಶಬ್ದ ಕೇಳಿದ ಆತ ಇತ್ತ ತಿರುಗಿದ. ಅವನ ಭಾವರಹಿತ ಮುಖ, ಕಿರುಗಣ್ಣುಗಳು ಸೂನ ಮೇಲೆ ನೆಟ್ಟವು. ಅವಳು ಹತ್ತಿರ ಬಂದ ಮೇಲೆ ಎದ್ದು ನಿಂತು "ಹೇಗಿದ್ದೀ ನಾಲ್ಕನೆಯ ತಂಗಿ? ಇನ್ನೂ ಸೂಜಾನಲ್ಲಿ ಇರುವೆಯಾ?" "ಓಹ್ ನೀನು ಇಲ್ಲಿಗೂ ಬಂದೆಯಾ?" ಎಂದವಳೇ, 'ಜುನ್, ನಾವು ಆ ಬೆಟ್ಟದ ತುದಿಗೆ ಹೋಗೋಣ', ಎಂದು ಒಂದೇ ಉಸಿರಿಗೆ ಓಡಿದಳು. ಅವಳ ಮನಸ್ಸು ಕದಡಿತ್ತು. ಮೈಯೆಲ್ಲ ನಡುಗುತ್ತಿತ್ತು.

ಜುನ್ ಹಿಂತಿರುಗಿ ಆ ಮನುಷ್ಯನನ್ನು ನೋಡಿದ. "ಅವನ್ಯಾರು, ನಿನ್ನನ್ಯಾಕೆ ತಂಗಿ ಎಂದು ಕರೆದ" ಎಂದು ಕೇಳಿದ.

ಸೂ ಅವನಿಗೊಂದು ಸುಳ್ಳು ಹೇಳಿದಳು. "ಆತ ನಂಗೆ ಪರಿಚಯದವ; ಚಿಕ್ಕವಳಿದ್ದಾಗ ನನ್ನನ್ನು 'ತಂಗಿ' ಎನ್ನು ತ್ತಿದ್ದ. ನಡೆ ಬೇಗ. ವಾಪಸ್ಸು ಹೋಗೋಣ" ಎಂದು ಹೊರಟೇ ಬಿಟ್ಟಳು. ಅವಳಲ್ಲಾದ ಬದಲಾವಣೆಯನ್ನು ಗಮನಿಸಿದ ಜುನ್ ಅವಳನ್ನು ಹಿಂಬಾಲಿಸಿದ.

ಬಾಗಿಲು ತಟ್ಟಿದ ಶಬ್ದ—ತುಸು ಹೊತ್ತು ಬಿಟ್ಟು ಪುನಃ ಅದೇ ಶಬ್ದ. ಸೂ ಹಾಸಿಗೆ ಬಿಟ್ಟು ಧಾವಿಸಿದಳು, ಜುನ್ ಕೀ ಒಯ್ಯುವುದನ್ನು ಮರೆತು ಬಂದಿರಬೇಕೆಂದು. ಬಾಗಿಲು ತೆರೆದಾಗ ಆ ಚಪ್ಪಟೆ ಮುಖದವನು. ಅದರೊಂದಿಗೆ ಮೈಯೆಲ್ಲಾ ಬೆವರೊಡೆಯಿತು. ಅದೇ ಆ ಮನುಷ್ಯ ಜುಗೋಹುನ್ ಅಂದು ಸಿಕ್ಕಿದವ. ಸೂ ಶಾಕ್ ಹೊಡೆದಂತೆ ನಿಂತಿದ್ದಳು. ಬಾಗಿಲು ಮುಚ್ಚುವುದೇ ಬೇಡವೇ ಎಂದು ತಿಳಿಯದೆ. ಆಚೀಚೆ ನೋಡಿದ. ಜುತಾ ಒಳಗೆ ಬಂದು ತಂಗಿ ಎನ್ನದೆ 'ಸು' ಎಂದು ಕರೆದಾಗ ಅವಳಿಗೆ ತಿಳಿಯಿತು, ಇವನು ತನ್ನ ಬಗ್ಗೆ ಎಲ್ಲಾ ತಿಳಿದು ಕೊಂಡಿದ್ದಾನೆ ಎಂದು. ಆದರೂ ಗಾಬರಿ ತೋರ್ಪಡಿಸದೆ ಅವನ ಮುಂದೆ ಬಂದು "ಹೇಗಿದ್ದೀರ ಶ್ರೀಯುತ ಜು ಅವರೇ?" ಎಂದಳು.

"ಹೊ ಹೋ ಚೆನ್ನಾಗಿದ್ದೀನಿ. ಹೀಗೇ ಏನೇನೋ ಮಾಡಿ ಶಿಕ್ಷೆಗಳನ್ನು ಅನುಭವಿಸಿದ್ದೀನಿ, ನೀನು ಚೆನ್ನಾಗಿ ಬದುಕುತ್ತೀಯೆಂದು ಕೇಳಿದೆ" ಎಂದ.

"ನನ್ನ ಬದುಕಿನ ಬಗ್ಗೆ ಮಾತು ಬೇಡ" ಎಂದು ಖಾರ ವಾಗಿ ಹೇಳಿದಳು. 'ಹೌದು ಹೌದು' ಎಂದಾತ ರೂಮಿನ ಎಲ್ಲ ವಸ್ತುಗಳನ್ನು ಗಮನಿಸಲು ಶುರುಮಾಡಿದ. ಅವಳ ಎದೆ ಬಡಿತ ವೇಗವಾಯ್ತು. ಏನು ಮಾಡಬೇಕೆಂದು ನಿಂತಿದ್ದಳು. ಅವಳ ಮುಖದಲ್ಲಿ ಭಯಮಿಶ್ರಿತ ಕೋಪ ಕಂಡ ಅವನಿಗೆ ಇನ್ನೂ ಧೈರ್ಯ ಬಂತು. ಬಾಲ್ಯದಲ್ಲಿ ಅವಳನ್ನು ಹಾಳುಮಾಡಿ ವೇಶ್ಯಾವಾಟಿಕೆಗೆ ತಳ್ಳಿದವರಲ್ಲಿ ಮೊದಲಿಗನಾಗಿದ್ದ. ಅವಳ ಮೈ, ಮನಸ್ಸು ಅರಳುವ ಮೊದಲೇ ಹಿಸುಕಿ ಹಾಕಿದ್ದ. ಅವನನ್ನು ಕಂಡರೆ ಅವಳಿಗೆ ಅಸಹ್ಯವಾಗುತ್ತಿತ್ತು. ತನ್ನ ಬದುಕಿನ ಕೀಳರಿಮೆಯಿಂದ ಕುಗ್ಗಿಹೋಗಿದ್ದ ಅವಳು ಅವನಿಗೆ ಕೀಲುಗೊಂಬೆಯಂತೆ ಕಂಡಳು. ಅವನ ರಾಕ್ಷಸೀ ಪ್ರವೃತ್ತಿ ಜಾಗೃತವಾಯಿತು. "ನಾಲ್ಕನೇ ತಂಗಿ, ನೀನೀಗ ದೊಡ್ಡವಳಾಗಿದ್ದೀ. ಜುನ್ ನಂತಹ ಪದವೀಧರ ಸಿಕ್ಕಮೇಲೆ. ಆದರೂ ನಿನ್ನ ಇತಿಹಾಸ ಅವನಿಗೆ ತಿಳಿಯದಂತೆ ಎಚ್ಚರವಹಿಸು. ನಾನೇನೂ ಬಾಯಿ

ಬಡುಕನಲ್ಲ. ಮೊದಲಿನ ನಮ್ಮಿಬ್ಬರ ಸಂಬಂಧ ಅವನಿಗೆ ತಿಳಿಸಲ್ಲ. ಬೇರೊಬ್ಬರಿಗೆ ಸಹಾಯ ಮಾಡುವುದೇ ಸಭ್ಯರ ಲಕ್ಷಣ ಅಲ್ಲವೇ?"

ಸೂಗೆ ಮಿಂಚು ಹೊಡೆದಂತಾಗಿತ್ತು. ನಿಸ್ತೇಜಳಾಗಿ ಕೇಳಿದಳು. "ನಿನಗಿವೆಲ್ಲಾ ಹೇಗೆ ಗೊತ್ತಾಯ್ತು?"

"ಹೇ' ನಾನೊಬ್ಬ ವ್ಯಾಪಾರಸ್ಥ. ಬೇರೆಯವರ ಬಗ್ಗೆ ತಿಳಿಯುವುದೇ ನನ್ನ ವ್ಯಾಪಾರ."

ಸೂಗೆ ಅವನನ್ನು ಬೈದು ಆಚೆಗಟ್ಟುವುದೋ ಅಥವಾ ಪೋಲೀಸರಿಗೆ ತಿಳಿಸುವುದೋ, ಎಂದು ತೋಚದಾಯಿತು. ಇದೆಲ್ಲಾ ಸುಲಭವಾಗಿ ಮಾಡಬಹುದು. ಆದರೆ ಜಾನ್‌ಗೆ ಎಲ್ಲ ಗೊತ್ತಾಗಿ ನನ್ನ ಭವಿಷ್ಯವೇ ಮುಗಿದುಹೋದರೆ— ಯೋಚಿಸುತ್ತಾ ಹೋದಂತೆ ತಲೆ ತಿರುಗುವಂತಾಯಿತು. "ನಿನಗೇನು ಬೇಕು, ಬೇಗ ಹೇಳು" ಎಂದಳು.

'ಓಹೋ! ನನಗೇನೂ ಬೇಡ. ಅಲ್ಲದೇ ಈಗ ಸ್ವಾತಂತ್ರ್ಯ ಮೊದಲಿನಂತಿಲ್ಲವಲ್ಲ. ಆದರೂ ನಾನೊಂದು ಚಿಕ್ಕ ಅಂಗಡಿ ಯಿಡಬೇಕೆಂದಿದ್ದೇನೆ. ಹಣ ಸಾಲದೆ ಬಂದಿದೆ. ನಿನ್ನಿಂದ ಸ್ವಲ್ಪ ಸಹಾಯ ಪಡೆಯೋಣವೆಂದುಕೊಂಡೆ. ನಿನಗೂ ಗೊತ್ತಲ್ಲ, ಎಲ್ಲರಿಗೂ ಕೆಟ್ಟಗಳಿಗೆಗಳು ಬರುತ್ತವೆಂದು."

ಸೂಗೆ ವಿಪರೀತ ಸಿಟ್ಟು ಬಂತು. ಆದರೂ ತಡೆದು ಕೊಂಡು ಒಂದಷ್ಟು ದುಡ್ಡನ್ನು ಮೇಜಿನ ಮೇಲಿಟ್ಟಳು.

ಜಾಗೌನು ಎದ್ದು ಧನ್ಯವಾದ ಹೇಳಿ ದುಡ್ಡನ್ನು ಎಣಿಸಿ ಪುನಃ ಮೇಜಿನ ಮೇಲಿಟ್ಟು "ಸೂ ನೀನು ಕಮ್ಮಿ ಕೊಟ್ಟೆ ಯೆಂದು ದೂರುತ್ತಿಲ್ಲ. ಅಥವಾ ಹಿಂದೆ ನಿನ್ನ ಮೇಲೆ ನಾನೆಷ್ಟು ದುಡ್ಡು ಸುರಿದಿದ್ದೀನೆಂದೂ ಅಲ್ಲ. ಆದರೆ ನೀ ಕೊಟ್ಟಿರುವ ಈ ದುಡ್ಡು ಯಾತಕ್ಕೂ ಸಾಲದು. ಈಗ ನಿನ್ನ ಬಳಿ ಇಲ್ಲದಿದ್ದರೆ ನಾಳೆ ಪುನಃ ಬರುವೆ".

ಸೂ ಸಿಟ್ಟು, ಅಸಹಾಯಕತೆಯಿಂದ ತಲ್ಲಣಿಸುತ್ತಿದ್ದಳು. ಟ್ರಾನಲ್ಲಿದ್ದ ತಿಂಗಳ ಸಂಬಳವನ್ನೆಲ್ಲ ಎಳೆದು ಅವನ ಮೇಲೆಸೆದು ಹಾಸಿಗೆಯ ಮೇಲೆ ಜೋರಲು ಬಿದ್ದು ಅಳ ಹತ್ತಿದಳು.

ಚಳಿಗಾಲ ಬಂತು. ಸೂ ಕಿಟಕಿಯಿಂದಾಚೆ ಬೀಳು ತ್ತಿರುವ ಮಂಜನ್ನು ದಿಟ್ಟಿಸುತ್ತಿದ್ದಳು. ಜಾನ್ ಇನ್ನು ಯಾಕೆ ಬರಲಿಲ್ಲವೆಂದು ಯೋಚಿಸುತ್ತಿದ್ದಳು. ಬಹುಶಃ ಜಾಗೌನು ನನ್ನ ಬಗ್ಗೆ ಹೇಳಿರಬೇಕು. ಅವನಿಗೆ ತನ್ನ ಪ್ರೀತಿ ಪಾತ್ರಳಾದವಳು ಸೂಳೆಯಾಗಿದ್ದಿರಬಹುದೆಂದು ತಿಳಿದು ಸಿಟ್ಟಾಗಿರಬಹುದು. ಗಡಿಯಾರದ ಸದ್ದುಕೂಡ ಜೋರಾಗಿ ಕೇಳಿಸುತ್ತಿತ್ತು. ಜಾನ್ ಪಕ್ಕದಲ್ಲಿ ಇಲ್ಲವಾಗಿ ಅವಳು ಯಾವ ಶಬ್ದಕ್ಕೂ ಹೆದರುತ್ತಿದ್ದಳು. ಅಥವಾ ಜಾಗೌನು ಈಗಾಗಲೇ ಹೇಳಿರಲಾರ....ನನ್ನ ಪೂರ್ತಿ ಹಿಂಡಿ ಹಿಪ್ಪೆ ಮಾಡಿಯೇ ತೀರುವನು. ಯೋಚನೆಗಳ ಸುಳಿಯಲ್ಲಿ ಮುಳುಗಿದ್ದಳು. ಜಾನ್ ಒಳಗೆ ಬಂದು ರೈನ್‌ಕೋಟನ್ನು ಕೊಡವಿ ಹೇಳಿದ: "ತುಂಬ ಮಂಜು ಬೀಳ್ತಿದೆ, ಆಚೆ ಹೋಗಿ ನೋಡು. ಈ ತರ ಮಂಜು ಎಷ್ಟೋ ವರ್ಷಗಳಿಂದ ಬಿದ್ದಿಲ್ಲ." ಅವನ ಧ್ವನಿ ಕೇಳಿದವಳೇ ಓಡಿ ಹೋಗಿ ಅವನಿಗೆ ಜೋತು ಬಿದ್ದಳು. "ಯಾಕೆ ಇಷ್ಟು ಹೊತ್ತು ಮಾಡಿದೆ? ಈ ನಡುವೆ ಯಾಕೆ ತಡಮಾಡಿ ಬರುತ್ತಿರುವೆ"?

"ಓಹ್ಹೋ ಇದೆಲ್ಲ ನಿನ್ನ ಕಲ್ಪನೆ. ಎಲ್ಲ ಮೊದಲಿನಂತೆ ಇದೆ. ಅನವಶ್ಯಕವಾಗಿ ತಲೆ ಕೆಡಿಸಿಕೋಬೇಡ. ಸೂ ನಿನಗೇನೇ ಆದರೂ ನಿನ್ನ ಬಿಟ್ಟು ಹೋಗಲ್ಲ ಆಯ್ತಾ?"

ಅವನನ್ನು ಇನ್ನೂ ಬಿಗಿಯಾಗಿ ಅಪ್ಪಿ, "ನನ್ನ ಬಿಡ ಬೇಡ, ನನ್ನ ಕೈ ಬಿಟ್ಟು ಹೋಗಬೇಡ. ನೀ ಬಿಟ್ಟರೂ ನಾನಿನ್ನ ಬಿಟ್ಟು ಬದುಕಲಾರೆ." ಜಾನ್ ಅವಳ ಹಿಡಿತ ದಿಂದ ಬಿಡಿಸಿಕೊಂಡು ಆಶ್ಚರ್ಯದಿಂದ ಅವಳ ಕಡೆ ನೋಡುತ್ತ ಕೇಳಿದ. "ನೀ ಯಾಕೆ ಇಷ್ಟು ಪೇಲವಾಗಿದ್ದಿ, ನಿನ್ನ ಕಣ್ಣಲ್ಲಿ ಯಾಕೆ ನೀರು?....ನಿನಗೇನು ತೊಂದರೆ ಯಿದೆ? ಏನೋ ಬಚ್ಚಿಡುತ್ತಿದ್ದೀ, ನಾ ನಿನ್ನ ಬಿಟ್ಟು ಬಿಡು ವಂತಹ ಕೆಲಸವೇನು ಮಾಡಿದ್ದಿ, ನನ್ನ ಪ್ರೀತಿಯ ಹುಡುಗಿ" ಹಾಗೆ ಏನೋ ಹೇಳಲು ಹೊರಟವ ಹೇಳಿದ 'ನಾವು ಬೇಗ ಮದುವೆ ಆಗೋಣ, ಸುಮ್ಮನಿರು.' ಸೂ ಜಾನ್‌ನಿಂದ ದೂರ ಸರಿದು ಹೇಳಿದಳು. "ನನ್ನನ್ನು ಬಿಟ್ಟುಬಿಡು. ನಾನು ನಿನಗೆ ಯೋಗ್ಯಳಲ್ಲ" ಎಂದು ಅಳುತ್ತ ಅವನ ಅಪ್ಪುಗೆಯಲ್ಲಿ ಸೇರಿದಳು.

ಜಾನ್‌ಗೆ ಅವಳ ಮೇಲೆ ಅತೀವ ಅನುಕಂಪವುಂಟಾ ಯಿತು. ಅವಳ ತಲೆ ಸವರುತ್ತಾ, "ನಾನು ನಿನ್ನ ಜೊತೆ ಆಟ ಆಡುತ್ತಿಲ್ಲ. ನನಗೊಂದು ಮೀಟಿಂಗ್ ಇದೆ. ಈಗ ಕೆಲಸಕ್ಕೆ ಹೋಗು. ನಾಳೆ ನಿನಗೆ ಕಲಿಸುತ್ತೇನೆ. ತುಂಬಾ ಯೋಚಿಸಬೇಡ." ಎಂದು ಹೊರಟ.

ಸೂ ಪುನಃ ಮೊದಲಿನ ಸ್ಥಿತಿಗೇ ಮರಳಿದಳು. ಅವನೇಕೆ ಬಂದ ತಕ್ಷಣ ಹೊರಡುತ್ತಿದ್ದಾನೆ, ಅಂದರೆ ನಮ್ಮ ಸ್ನೇಹದ ಕೊನೆ ಸದ್ಯದಲ್ಲೇ ಎಂದುಕೊಂಡವಳೇ ಬೀರು ತೆಗೆದು ಹೊಸಬಟ್ಟೆ, ಹೊಸ ಚಪ್ಪಲಿ ಧರಿಸಿ ಕನ್ನಡಿ ಮುಂದೆ ನಿಂತು ಮುಗುಳ್ನಕ್ಕಳು. ನಿಟ್ಟುಸಿರು ಬಿಟ್ಟು ಒಂದೊಂದಾಗಿ ಕಳಚಿಟ್ಟಳು. ಈ ಹೊಸ ವಸ್ತುಗಳನ್ನೆಲ್ಲ ಅವಳ ಮದುವೆಗೆಂದು ಸಂಗ್ರಹಿಸಿಟ್ಟಳು. ಮದುವೆ ಅವಳಿಗೆ ಊಹಿಸಲಾರದ ಕನಸಾಗಿದ್ದರೂ ಅದಕ್ಕೆ ಸಿದ್ಧವಾಗಿದ್ದಳು. ಜುನ್ ಜೊತೆಯಲ್ಲಿ ಇಲ್ಲದಾಗ ಆ ಹೊಸ ವಸ್ತುಗಳನ್ನು ತೆಗೆದು ನೋಡುತ್ತಾ ಕನಸಿನ ಲೋಕಕ್ಕೆ ಹಾರುತ್ತಿದ್ದಳು. ನಿರಾಸೆ-ಬೇಸರವಾದಾಗಲೆಲ್ಲ ಅವಳಿಗೆ ಇದೇ ಹವ್ಯಾಸವಾಗಿತ್ತು.

"ಹೇಗಿದ್ದೀ ಸೂ? ಓಹ್ಹೋ ನಿನ್ನ ಮದುವೆಗೆ ಸಿದ್ಧವಾಗುತ್ತಿದ್ದೀ. ನನಗೀಗ ಆತಿಥ್ಯವಿದೆ ತಾನೇ?"

ಜಗ್ಹೋನ್! ಜುನ್ ಹೋಗುವಾಗ ಬಾಗಿಲು ಬೀಗ ಹಾಕುವುದನ್ನು ಮರೆತು ಹೋಗಿದ್ದಾನೆ! ಜುಗ್ಹೋನ್‌ನನ್ನು ನೋಡಿದ ತಕ್ಷಣ ಅವಳ ಕನಸೆಲ್ಲ ಪುಡಿ ಪುಡಿಯಾದವು. ಹೊಸ ಬಟ್ಟೆಗಳನ್ನು ಎತ್ತಿಟ್ಟು, "ಈಗೇತಕ್ಕೆ ಬಂದಿರುವೆ?" ಎಂದಳು.

"ಕಳೆದ ಬಾರಿ ನಿನ್ನ ಹತ್ರ ಸ್ವಲ್ಪ ಹಣ ತೆಗೆದುಕೊಂಡಿದ್ದೆ. ನನಗೆ ಪುನಃ ಹಣ ಬೇಕಾಗಿತ್ತು."

"ನಾನೇನು ನಿನ್ನ ಸಾಲಗಾರಳಲ್ಲ, ನಡಿ ಆಚೆ" ಕಿಡಿ ಕಾರುವ ಕಣ್ಣುಗಳಿಂದ ಅವನನ್ನು ನೋಡುತ್ತಾ ಹೇಳಿದಳು.

"ಯಾಕೆ ಸಿಟ್ಟಾಗುತ್ತೀಯಾ? ಬಂದದ್ದೆಲ್ಲಾ ಅನುಭೋಗಿಸಬಾರದು. ಹಂಚಿ ಬದುಕಬೇಕು."

ಜುಗ್ಹೋನ್ ಅವಳ ಸಂತೋಷವನ್ನು ಸಮಾಧಿ ಮಾಡಿದ್ದ. ಅವನೊಡನೆ ಕಾದಾಡದೆ ಅವಳಿಗೆ ವಿಧಿ ಇರಲಿಲ್ಲ. ಆದರೆ ಅಲ್ಲಿದ್ದ ಹೊಸ ಉಡುಗೆಗಳನ್ನು ನೋಡಿದಾಗ ಅವಳ ಮನಸ್ಸು ದೌರ್ಬಲ್ಯಕ್ಕೆ ಈಡಾಯಿತು. ಒಂದಷ್ಟು ದುಡ್ಡು ಹೊರತೆಗೆದಳು. ಇಷ್ಟು ಸಲೀಸಾಗಿ ಅವಳಿಂದ ಎರಡನೇ ಬಾರಿ ಹಣ ವಸೂಲು ಮಾಡಬಹುದೆಂದು ಅವನು ನೆನೆಸಿರಲಿಲ್ಲ. ಅವಳ ದೌರ್ಬಲ್ಯವನ್ನು ಗಮನಿಸಿದ. ಅವನಿಗೆ ಅವಳ ದೇಹ ಮೈ ಕೈ ತುಂಬಿಕೊಂಡು ಆಕರ್ಷಕವಾಗಿ ಕಂಡಿತು. ಅವನ ತೃಷೆ ಮೇಲೆದ್ದಿತು. "ಈ ರಾತ್ರಿ ನಿನ್ನೊಂದಿಗೆ ಮಲಗುತ್ತೇನೆ" ಎಂದ. ಕೆನ್ನೆಗೆರೆಡು ಛಟೀರನೆ ಏಟು ಬಿದ್ದಾಗ ಹಿಂದೆ ಸರಿದು, "ಹ್ಹೇ ಹ್ಹೇ ಇದೇನು ಇಷ್ಟೊಂದು ಮರ್ಯಾದೆ ನಿನಗೇ! ಇದೇನು ಹೊಸದಲ್ಲವಲ್ಲ!" ಸೂ ಸಿಟ್ಟು ಅವಮಾನಗಳಿಂದ ಕೆಣಕಿದ ಸಿಂಹವಾದಳು. ತನ್ನೆಲ್ಲ ಶಕ್ತಿಯನ್ನು ಬಿಟ್ಟು ಜುಗ್ಹೋನನ್ನು ಹೊಡೆಯತೊಡಗಿದಳು. ಅದೇನು ದೊಡ್ಡ ಪೆಟ್ಟುಗಳಾಗಿರಲಿಲ್ಲ ಆ ರಾಕ್ಷಸನಿಗೆ. ಸೂ ಅವನನ್ನು ಬಿಗಿಯಾಗಿ ಕಚ್ಚಿದಾಗ, ಅಲ್ಲಿದ್ದ ಸ್ಟೂಲೊಂದನ್ನು ಎತ್ತಿ ಅವಳಿಗೆ ಹೊಡೆಯಲು ಹೊರಟವ ಹಾಗೇ ಕಡೆಯದಾಗಿ "ಮೂರ್ಖಳಾಗಬೇಡ, ನಿನ್ನ ಭವಿಷ್ಯದ ಬಗ್ಗೆ ಯೋಚಿಸು" ಎಂದ. ಅವಳಿಗೆ ಅವನ ಮಾತುಗಳು ಕಿವಿಗೆ ಬೀಳಲೇ ಇಲ್ಲ. ಅದೇ ಸ್ಟೂಲನ್ನು ಕಸಿದು ಅವನೆಡೆಗೆ ರೊಯ್ಯನೆ ಬೀಸಿದಳು. ಅವನೆಣಿಸಿದಂತೆ ಆಗುತ್ತಿಲ್ಲವೆಂದು ತಿಳಿದವನೇ ಹೊಡೆತ ತಪ್ಪಿಸಿಕೊಂಡು ಸದ್ದಿಲ್ಲದೆ ಆಚೆ ಹೊರಟ.

ಸೂ ಅಲ್ಲಿಂದ ಒಂದೇ ಸಮನೆ ಓಡುತ್ತಾ ಜುನ್‌ನ ಮನೆಗೆ ಧಾವಿಸಿದಳು. ಜುನ್‌ನ ಮನೆಯ ಬಾಗಿಲಲ್ಲಿ ನಿಂತಿದ್ದ ಹೂವಿನ ತಲೆ ಕೆದರಿತ್ತು. ಅವಳ ಮುಖ ಕಳೆಗುಂದಿತ್ತು. ಏನೇ ಆದರೂ ಸರಿ, ಎಲ್ಲ ಹೇಳಿಬಿಡುವ ನಿರ್ಧಾರ ಅವಳ ಕಣ್ಣಲ್ಲಿತ್ತು. ಆದರೂ ಅವಳ ಕಾಲು ಕೀಳುತ್ತಿತ್ತು. ಜುನ್ ಆಚೆಗೆ ನೀರೆಸೆಯಲು ಬಂದವನು ಯಾರೋ ನಿಂತದ್ದು ನೋಡಿ ಹಾಗೆ ತಡೆದನು. ಸೂ! ಅವನಿಗೆ ಆಶ್ಚರ್ಯ. ಆದರೆ ಅವಳ ಸ್ಥಿತಿ ನೋಡಿದವನೇ ಅವಳನ್ನು ಹಾಸಿಗೆ ಮೇಲೆ ಕೂಡಿಸಿ 'ಏನಾಯ್ತು, ಬೇಗ ಹೇಳು' ಎಂದನು. ಅವಳ ಕಣ್ಣನೋಟ ಶೂನ್ಯವಾಗಿತ್ತು. ಅವನ ಮಾತು ಕೇಳಿದ ತಕ್ಷಣ ಅವಳ ಕಣ್ಣೀರು ತಡೆಯಿಲ್ಲದೆ ಹರಿಯಿತು. ಜುನ್‌ಗೆ ಆತಂಕವಾಯಿತು. "ಏನಾಯ್ತು, ಅಳಬೇಡ, ಬೇಗ ಹೇಳು" ಎಂದು ಒತ್ತಾಯಿಸಿದ.

ಸೂ ಅವಳ ಎದೆ ಭಾರ ಕಡಿಮೆಯಾಗುವವರೆಗೆ ಅವನೆದೆಗೆ ಒರಗಿ ಅತ್ತಳು. ಸ್ವಲ್ಪ ಹಗುರ ಎನಿಸಿದಾಗ ಅಳು ನಿಲ್ಲಿಸಿ ನಿಟ್ಟುಸಿರು ಬಿಡುತ್ತಾ ತನ್ನ ಗತ ಜೀವನವನ್ನು ಹೇಳಿಕೊಂಡಳು. ಎಷ್ಟು ರಾತ್ರಿಗಳು ಇವನ್ನೆಲ್ಲಾ ತನ್ನೊಳಗೆ ಅಡಗಿಸಿಟ್ಟುಕೊಂಡಿದ್ದಳೋ! ಅವಳ ಎದೆಯನ್ನು ಪ್ರತಿದಿನ ಇರಿಯುತ್ತಿದ್ದ ಆ ನೆನಪುಗಳು, ಇಂದು

ಎಲ್ಲ ಅವನೆದುರಿಗೆ ಬಿಚ್ಚಿಕೊಂಡಾಗ ಭಯ ಹುಟ್ಟಿಸಲಿಲ್ಲ. ಅವಳ ಮಾತು ಮುಗಿಯುವ ಹೊತ್ತಿಗೆ ಆ ಹಳೆಯ ಸಮಾಜದಿಂದ ತಾನೆಷ್ಟು ಅನುಭವಿಸಬೇಕಾಯ್ತು ಎಂದು ಹೇಳುವಲ್ಲಿಗೆ ಅವಳು ಪುನಃ ಮಾಮೂಲಾಗಿದ್ದಳು. ಜುನ್‌ಗೆ ಅವಳ ಕತೆ ಕೇಳಿ ವಿಪರೀತ ಸಿಟ್ಟು ಬಂತು. "ಎಲ್ಲಿದ್ದಾನೆ ಆ ದೈತ್ಯ? ಅವನನ್ನು ಈಗಲೇ ಮುಗಿಸಿ ಬಿಡುತ್ತೇನೆ" ಎಂದ.

"ಅವನ ಕತೆ ಬಿಡು, ಪೋಲೀಸರು ನೋಡಿಕೊಳ್ಳು ತ್ತಾರೆ. ನನ್ನಿಂದಲೂ ತಲೆ ಕೆಡಿಸಿಕೊಳ್ಳಬೇಡ. ನೀನು ನನ್ನ ಕ್ಷಮಿಸಬೇಕು. ನಿನ್ನ ಪ್ರೀತಿಯಲ್ಲಿ ಮುಳುಗಿ ಹೋಗಿದ್ದೆ. ನನ್ನನ್ನು ಕ್ಷಮಿಸು" ಎಂದಳು.

"ಅಳಬೇಡ ಸೂ, ನಿನ್ನನ್ನು ಹೇಗೆ ದೂಷಿಸಲಿ?"

"ಹೌದು, ನನ್ನದೇ ತಪ್ಪು. ನಾನು ತುಂಬಾ ಸ್ವಾರ್ಥಿ ಯಾಗಿದ್ದೆ. ಇಷ್ಟು ದಿನ ನಿನಗೆ ಹೇಳಲೇ ಇಲ್ಲ. ನನ್ನನ್ನು ಮರೆತು ಬಿಡು. ಮೊದಲಿಗೆ ಕಷ್ಟವಾದರೂ ದಿನ ಕಳೆದಂತೆ ನನ್ನನ್ನು ಮರೆಯಬಲ್ಲೆ. ಆದರೆ ಎಂದೆಂದಿಗೂ ಈ ಸೂ ನಿನ್ನನ್ನು ಕೈ ಹಿಡಿಯಲಾಗದಿದ್ದರೂ ನಿನ್ನ ಶುಭವನ್ನು ಬಯಸುತ್ತಾಳೆ, ಎಂಬುದನ್ನು ನೆನಪಿಟ್ಟುಕೊ." ಸೂಗೆ ಮುಂದೆ ಹೇಳಲಾಗಲಿಲ್ಲ. ದುಃಖದ ಕಟ್ಟೆ ಒಡೆಯಿತು.

ಜುನ್ ತುಂಬಾ ಘಾಸಿಗೊಂಡಿದ್ದ. ಸೂನ ಅಳು ಅವನ ಎದೆ ಹಿಡಿದಂತಾಯ್ತು. ಚಿಂತೆಯ ಸುಳಿಯಲ್ಲಿ ಸಿಕ್ಕಿ ಅವನು ಮೌನವಾಗಿದ್ದುದು ನೋಡಿ, ಹೀಗೆ ಕೊನೆಯಾಗ ಬೇಕಿತ್ತು ಎಂದು ತಿಳಿದವಳೇ ಎದೆಯೊಳಗೆ ಒತ್ತಿ ಬರು ತ್ತಿದ್ದ ದುಃಖವನ್ನು ತಡೆ ಹಿಡಿದು "ಹೋಗುತ್ತೇನೆ" ಎಂದು ಹೇಳಿ ಹೊರಟೇ ಹೋದಳು.

ಜುನ್ ಮನಸ್ಸು ಅಲ್ಲೋಲಕಲ್ಲೋಲವಾಗಿತ್ತು. ಅದೇ ಗಲ್ಲಿಯಲ್ಲಿ ಶತಪಥ ತುಳಿಯುತ್ತಿದ್ದ. ದೀಪದಡಿಯಲ್ಲಿ ಕುಳಿತ ಆ ಹುಡುಗಿ ಅವನಿಗೆ ಸುಂದರ ಹಾಗೂ ಒಳ್ಳೆತನ ಗಳ ಪ್ರತೀಕವಾಗಿದ್ದಳು. ಅವಳೊಂದಿಗೆ "ವೇಶ್ಯೆ" ಪದ ಸೇರಿಸುವುದು ಅವನಿಗೆ ಅಸಾಧ್ಯವಾಗಿತ್ತು. ಆದರೆ ಅವಳೆ ಸುಂದರ ಹಾಗೂ ಒಳ್ಳೆಯ ಗುಣಗಳ ಜೊತೆ ಅವಳೊಮ್ಮೆ ವೇಶ್ಯೆಯೂ ಆಗಿದ್ದಳು. ಅಸಾಧ್ಯವಾದರೂ, ಅಪ್ರಿಯ ವಾದರೂ ನಂಬಬೇಕಾಗಿತ್ತು. ಆದರೂ ಅವಳನ್ನು ದೂಷಿಸಲು ಅವನಿಗೆ ಮನಸ್ಸಾಗಲಿಲ್ಲ. ಬಿಳಿ ರೇಷ್ಮೆ ಯಂತಿದ್ದ ಅವಳನಡತೆಗೆ ಕಪ್ಪು ಬಳಿದ ಸಮಾಜದ ಮೇಲೆ ಅವನಿಗೆ ಸಿಟ್ಟು ಉಕ್ಕುತ್ತಿತ್ತು. ಅನಾಥೆಯ ಮೇಲೆ ದೌರ್ಜನ್ಯ ನಡೆಸಿದ ಜನರ ಬಗ್ಗೆ ಅವನಿಗೆ ಹೇಸಿಗೆಯಾಗು ತ್ತಿತ್ತು. ಸೂ ಬೇರೆ ಯಾರೋ ಆಗಿದ್ದಿದ್ದರೆ ಅವನು ಸಹಾನುಭೂತಿ ಪಡುತ್ತಿದ್ದ. ಆದರೆ ಸೂ ತನ್ನ ಜೀವನ ಸಂಗಾತಿಯಾಗಬೇಕಾದವಳು. ಅವಳೊಂದಿಗೆ ಸಂತೋಷ ವಾಗಿ ಕಳೆದ ದಿನಗಳು ಕಣ್ಮುಂದೆ ಕುಣಿದಾಡಿದವು. ಅವಳೊಂದಿಗಿದ್ದಾಗ ಆಕಾಶ ಬಹು ಸುಂದರವಾಗಿತ್ತು. ರಸ್ತೆ ಸಲೀಸಾಗಿತ್ತು. ಜೀವನದ ಆಸೆಗಳನ್ನೆಲ್ಲಾ ಅವಳ ಜೊತೆ ಹೆಣೆದಿದ್ದನು.

ಸೂ ಆದರೋ ಬದುಕಲ್ಲಿ ಕಡುಕಷ್ಟವನ್ನುಂಡು ತನಗೆ ನಿರ್ಮಲ ಪ್ರೀತಿಯನ್ನು ನೀಡಿದ್ದಳು. ತನ್ನ ನೋವುಗಳ ನ್ನೆಲ್ಲಾ ಅದುಮಿಟ್ಟು ಅವನನ್ನು ಪ್ರೀತಿಸಿದ್ದಳು. ಅವನೊಂದಿಗೆ ಸುಂದರ ಜೀವನದ ಹೊಂಗನಸು ಕಂಡಿದ್ದಳು. ಅವಳ ಪ್ರೀತಿಯು ನೆನಪಾದಂತೆ ಜುನ್‌ಗೆ ತಾನೆಷ್ಟು ಸಣ್ಣವನಾಗುತ್ತಿದ್ದೇನೆನಿಸಿತು. ಅಂತಹವಳನ್ನು ಮದುವೆ ಯಾಗುವುದರಲ್ಲಿ ತಪ್ಪೇನಿದೆ? ಅವನ ಮನಸ್ಸು ಚೀರಿತು: "ಹೋಗಿ ಹೇಳು, ನಿನ್ನನ್ನು ಬಿಟ್ಟಿರಲಾರೆ. ಇಬ್ಬರೂ ಒಟ್ಟಿಗೆ ಕೈ ಹಿಡಿದು ಜೀವನದ ನದಿಯನ್ನು ಈಜೋಣ. ಓಡಿ ಹೇಳು." ತಕ್ಷಣವೇ ಸೂ ಮನೆಗೆ ಧಾವಿಸಿದ. ಬಾಗಿಲ ಬಳಿ ನಿಂತಾಗಲೇ ಕೀ ಮರೆತು ಬಂದಿರುವುದು ನೆನಪಾಯಿತು. ಆದರೇನು ಜೋರಾಗಿ ಬಾಗಿಲು ತಟ್ಟಲಾರಂಭಿಸಿದ.

ಸೂಜೌ, ಆ ಹಳೆಯ ಊರು, ಸುಂದರ ನಗರ ನಿಶ್ಶಬ್ದವಾಗಿ ಮಲಗಿತ್ತು. ಆ ಗಲ್ಲಿಯೊಳಗಿನ ಬಾಗಿಲು ತಟ್ಟುವ ಶಬ್ದವೊಂದೇ ಕೇಳುತ್ತಿತ್ತು. ●

—o—o—o—

# ನನ್ನ ಕತೆ .... ನಮ್ಮ ಕತೆ

— ನೇಮಿಚಂದ್ರ

ದಶಕಗಳ ಹಿಂದಕ್ಕೆ ಸರಿದಾಗ, ನನ್ನ ಬಾಲ್ಯದ ನೆನಪು. ನಮ್ಮ ಮನೆ ಇದ್ದ ಬೀದಿಯ ತುದಿಗೆ ಅಮ್ಮನ ಆಪ್ತ ಸ್ನೇಹಿತೆಯ ಮನೆ. ಅಮ್ಮ ಮಧ್ಯಾಹ್ನ ಮನೆಕೆಲಸ ಮುಗಿಸಿ ಅಲ್ಲಿಗೆ ಹೊರಟರು ಎಂದರೆ, ಅಮ್ಮನ ಸೆರಗು ಹಿಡಿದು ನಾನೂ ಹೋಗುತ್ತಿದ್ದೆ. ಅಮ್ಮ ಹೋದೊಡನೆ, ಆಕೆ ತನ್ನ ಸಂಸಾರದ ಗೋಳೆಲ್ಲ ಹೇಳಿಕೊಳ್ಳುತ್ತಿದ್ದರು. ಆಕೆಯ ಗಂಡ ತುಮಕೂರಿನ ಹೊರಗೆಲ್ಲೋ ಕೆಲಸದಲ್ಲಿದ್ದರು. ಸರಿಯಾಗಿ ದುಡ್ಡು ಕೊಡುತ್ತಿರಲಿಲ್ಲ. ಬಂದಾಗಲೆಲ್ಲ ಹೊಡೆತ ಖಂಡಿತ. ಚಾಕು-ಚೂರಿ ತೋರಿಸಿ 'ಕೊಂದು ಬಿಡುತ್ತೇನೆ' ಎಂದು ಹೆದರಿಸಿದ್ದೂ ಉಂಟು. ಎಲ್ಲ ಅಮ್ಮನ ಎದುರು ಹರವಿಕೊಂಡು ಸ್ವಲ್ಪ ಹಗುರಾಗುತ್ತಿದ್ದರು. ಎಂಟು ವರ್ಷಗಳ ನಂತರ ಆತ ಸತ್ತ. ಒಂದಿಷ್ಟು ಹಣ, ಪಿಂಚಣಿ, ನಾಲ್ಕು ಮಕ್ಕಳ ಸಂಸಾರ ನಿಲ್ಲಿಸಿತು. 'ಪೀಡೆ ಕಳೆಯಿತು' ಎಂಬ ಸಮಾಧಾನ ಆಕೆಗೆ !

ಮತ್ತಷ್ಟು ನೆನಪುಗಳಿವೆ. ಅಮ್ಮ ಕಾಂಪೌಂಡಿನ ಗೋಡೆ ಬಳಿ ನಿಂತು ಪಕ್ಕದ ವಠಾರದ ಹೆಂಗಸರೊಡನೆ ಮಾತನಾಡುತ್ತಾ ನಿಲ್ಲುತ್ತಿದ್ದದ್ದು. ಹೆಂಗಸರು ತಮ್ಮ ಗಂಡಂದಿರ ಸಿಟ್ಟು ಸೆಡವುಗಳ ಅದೆಂಥದ್ದೋ ಹೆಮ್ಮೆಯಿಂದಲೇ ಹೇಳಿಕೊಳ್ಳುತ್ತಿದ್ದರು. 'ಇವರಿಗೆ ಸಾರಿಗೆ ಉಪ್ಪು ಚೂರು ಹೆಚ್ಚಾಗಲಿಕ್ಕಿಲ್ಲ, ತಟ್ಟೇನೇ ನೂಕಿಬಿಡ್ತಾರೆ' ಎಂದದ್ದು ಹಸಿ ಹಸಿಯಾಗಿ ನೆನಪಿದೆ. ಅಮ್ಮನೂ ತನ್ನದೊಂದಿಷ್ಟು ಸೇರಿಸಿರಬಹುದು. ಗಂಡನ ಸಿಟ್ಟು ಕೋಪದಲ್ಲಿ ಗತ್ಯಂತರವೇ ಇಲ್ಲದೆ ಎಂಥದ್ದೋ ಪೌರುಷ ಕಾಣಲು ಹೊರಟ ಕಾಲ. ಆರ್ಥಿಕವಾಗಿ ಗಂಡನ ಮೇಲೆ ನಿರ್ಬರಿತ ಈ ಹೆಂಗಸರಿಗೆ, ಗಂಡನ ಕೋಪತಾಪಗಳ ತಾಳಿಕೊಳ್ಳಲು ಅಖಂಡ ತಾಳ್ಮೆ ಬೆಳೆಸಿಕೊಳ್ಳಲೇಬೇಕಿತ್ತು.

ಈ ದಶಕಗಳಲ್ಲಿ ಹೆಚ್ಚೇನೂ ಬದಲಾಗಿಲ್ಲ. ಬಹಳ ಇತ್ತೀಚೆಗೆ, ಬೆಳೆದ ಮಕ್ಕಳ ಎದುರು ವಿಶ್ವವಿದ್ಯಾಲಯದ ಪ್ರೊಫೆಸರ್ ಪತಿ, ತಮ್ಮ ಹೆಂಡತಿಯ ಹಿಡಿದು ಬಡಿದದ್ದು ನೋಡಿದೆ. ಇಂಥ ದೈಹಿಕ ಹೊಡೆತ ಅಪರೂಪದ ಒಂದು ಕ್ಷಣದ ಕೋಪದ ಪ್ರಕೋಪವಲ್ಲ, ದಿನನಿತ್ಯದ ಅಭ್ಯಾಸವೆಂದರೆ, ಅದಕ್ಕೆ ಮೂಲ ಕಾರಣ 'ಹೆಂಡತಿಯ ಮೇಲೆ ತನಗೆ ಅಧಿಕಾರವಿದೆ' ಎಂಬ ಭಾವನೆಗೆ ಒತ್ತುಕೊಡುವ ಗಂಡ-ಹೆಂಡಿರ ಅಸಮತೋಲನ ಸಂಬಂಧಗಳು. ಜೀತದಾಳುಗಳ ಮೇಲೆ ಹಕ್ಕಿನಂತೆ ನಡೆಸುವ ದೌರ್ಜನ್ಯಕ್ಕಿಂತ ವ್ಯತ್ಯಾಸವೇನೂ ಹೆಚ್ಚಿಲ್ಲ.

ಹೀಗಿದ್ದೂ, ಬಡಿವ ಗಂಡಂದಿರು ಬದಲಾಗದಿದ್ದರೂ ಬಡಿಸಿಕೊಳ್ಳುವ ಹೆಂಗಸರು ಬದಲಾಗಿದ್ದಾರೆ. ಮದುವೆಯಾಗಿ ಗಂಡನ ಮನೆಗೆ ಹೋದ ನನ್ನ ಸ್ನೇಹಿತೆ, ತಿಂಗಳಲ್ಲೇ ಕೈ ಮುರಿದುಕೊಂಡು ಹಿಂತಿರುಗಿದಳು. ಡಿಗ್ರಿ ಆದ ಪುಣ್ಯಕ್ಕೆ, ಕೆಲಸ ಹಿಡಿದು ಆ ವಿವಾಹಕ್ಕೆ ಮುಖ ತಿರುಗಿಸಿದ್ದಾಳೆ. ಆದರೆ ಎಲ್ಲ ಕ್ರೌರ್ಯ ತುಂಬಿದ ವಿವಾಹಗಳು ಇಷ್ಟು ಶೀಘ್ರವಾಗಿ, ಇಷ್ಟು ಸುಲಭವಾಗಿ ಮುಗಿಯುವವಲ್ಲ. ಇಂಥಾ ಹಿಂಸೆಯ ವಿವಾಹದಲ್ಲೇ ಕಡೆವರೆಗೆ ಉಳಿದು ತಮ್ಮೊಡನೇ ತಮ್ಮ ಕರ್ಮಕತೆಯನ್ನೂ ನಿಗೂಢವಾಗಿ ಉಳಿಸಿ ಹೋಗುವವರೇ ಹೆಚ್ಚು.

ವೈವಾಹಿಕ ಬದುಕಿನಲ್ಲಿ ಗಂಡನ ಹೊಡೆತ ಕೇವಲ ಕೆಳವರ್ಗಕ್ಕೆ, ಅವಿದ್ಯಾವಂತರಿಗಷ್ಟೇ ಅನ್ವಯಿಸುತ್ತದೆ, ಕುಡುಕರು ಕೆಡುಕರು ಮಾತ್ರ ಬಡಿಯುತ್ತಾರೆ ಎಂಬ ಅನೇಕ ತಪ್ಪು ಕಲ್ಪನೆಗಳು ನಮ್ಮಲ್ಲಿ ಬಹಳ ಜನಕ್ಕಿದೆ. ವೈವಾಹಿಕ ಬದುಕಿನಲ್ಲಿ ಈ ಹಿಂಸೆ ಹೇಗೆ ಸ್ಫೋಟವಾಗುತ್ತದೆ, ಹೇಗೆ ಉಳಿದು ಬೆಳೆದು ಹೆಣ್ಣನ್ನು ದೈಹಿಕವಾಗಿ ಮಾನಸಿಕವಾಗಿ ಛಿದ್ರವಾಗಿಸುತ್ತದೆ, ಎಂಬೆಲ್ಲ ಪ್ರಶ್ನೆಗಳಿಗೆ ಉತ್ತರವಾಗಿದೆ ಪ್ಲೇವಿಯಾರವರ ಆತ್ಮಚರಿತ್ರೆ 'ನನ್ನ ಕತೆ...ನಮ್ಮ ಕತೆ'. ಪಟ್ಟಣದ ನಾಗರೀಕತೆಯ ಹುಸಿ ಸೋಗಿನಲ್ಲಿ ಹೆಂಗಸರು ತಮ್ಮ ಮೇಲಿನ ಎಷ್ಟೋ ಅತ್ಯಾಚಾರಗಳ ಮುಚ್ಚಿಹಾಕುತ್ತಾರೆ. ಅದೂ ತಮ್ಮವರಿಂದಲೆ ನಡೆವ ದೌರ್ಜನ್ಯಗಳಂತೂ ಹೊರಬಾರದೆ ಹೊಡೆತ ಬಡಿತದ ಕೆಂಪು-ನೀಲಿ ಕಲೆಗಳು 'ನಲ್ಲಿ ತಾಕಿತು' 'ಎಡವಿಬಿದ್ದೆ' ಎಂಬ ಸಬೂಬುಗಳಲ್ಲಿ ಮುಚ್ಚಿಹೋಗುತ್ತವೆ. ಈಕೆಯ

ಆತ್ಮಚರಿತ್ರೆ ವಿಶಿಷ್ಟವಾಗುವುದು, ಯಾವುದೇ ಕೆಲಸವಿಲ್ಲದ ಈಕೆ ಇಂಥಾ ವಿವಾಹದಿಂದಾಚೆ ಬಂದದ್ದಲ್ಲದೆ, ಇಂಥಾ ವಿವಾಹಗಳನ್ನೇ ತನ್ನ ಅಧ್ಯಯನಕ್ಕೆ ವಸ್ತುವಾಗಿ ಆರಿಸಿ ಕೊಂಡು, ನಮ್ಮ ಸಮಾಜದ ಮತ್ತೊಂದು ಮುಸುಕಿ ನಡಿಯ ದೌರ್ಜನ್ಯವ ಹೊರಗೆಳೆದ ಕಾರಣಕ್ಕೆ.

ಕನ್ನಡದ ಹುಡುಗಿ ಫ್ಲೇವಿಯಾ, ವಿಧವೆ ತಾಯಿಯ ಐದು ಮಕ್ಕಳಲ್ಲಿ ಒಬ್ಬಳು. 1967ರಲ್ಲಿ, ತನ್ನ 20ನೇ ವಯಸ್ಸಿಗೆ ಬಾಂಬೆಯಲ್ಲಿ ಕಂಪನಿ ಸೆಕ್ರೆಟರಿಯಾಗಿ ಕೆಲಸ ಮಾಡುತ್ತಿದ್ದ ಹುಡುಗನೊಡನೆ ವಿವಾಹವಾಯಿತು. ಆಕೆ ಸಣ್ಣ ಊರಿನ ಶಾಂತ ವಾತಾವರಣದಲ್ಲಿ ಬೆಳೆದವಳು, ಆತನೂ ಹಳ್ಳಿಯಿಂದ ಬಂದವನಾದರೂ, ಬಾಂಬೆ ಸೇರಿ ನಿಜಕ್ಕೂ ಶ್ರಮಪಟ್ಟು, ಇಂದು ಪ್ರತಿಷ್ಠಿತ ಸ್ಥಾನದಲ್ಲಿದ್ದ.

ಮಧುಚಂದ್ರ ಮುಗಿಯುವ ಮೊದಲೇ ಬಿರುಕು ಕಾಣಿಸಿತ್ತು. 'ನೀ ಮದುವೇಲಿ ಹಾಕಿಕೊಂಡಿದ್ದ ಒಡವೆ ಎಲ್ಲ ತಾ' ಅಂದ. 'ಅದೆಲ್ಲ ನನ್ನವಲ್ಲ. ಅಮ್ಮ ಎರಡು ಚಿನ್ನದ ಸೆಟ್ ಹಾಕಿದ್ದಾಳೆ. ನಾನೇನೂ ಕೇಳೋಲ್ಲ' ಎಂದದ್ದೇ ತಡ ಆತನ ಬಿಗಿ ಹಿಡಿತ ಅವಳ ತೋಳಿನ ಮೇಲೆ ನೀಲಿ ಪಟ್ಟೆ ಮೂಡಿಸಿತ್ತು. ಅವರಿವರು ಕೇಳಿದಾಗ ಅದಕ್ಕೊಂದು ಸುಳ್ಳು ಹೆಣೆದ್ದಾಯ್ತು. ಮೊದಲ ಬಾರಿಗೆ ಆತ 'ಹೊಡೀತೀನಿ ನೋಡು' ಎಂದಾಗ ನಿಜಕ್ಕೂ ತಮಾಷೆ ಮಾಡುತ್ತಿದ್ದಾನೆ ಎಂದೇ ತಿಳಿದಿದ್ದಳು. ಮೊದಲ ಬಾರಿಗೆ ಆಕೆಯ ಮೇಲೆ ಕೈ ಎತ್ತಿದಾಗ, ಶಾಕ್‌ನಿಂದ ಚೇತರಿಸಿಕೊಳ್ಳಲು ಸಮಯ ಹಿಡಿದಿತ್ತು. 'ಖಂಡಿತಾ ಇದು ನಿಜವಿರಲಿಕ್ಕಿಲ್ಲ' ನಂಬಲಾರದೆ ತನ್ನನ್ನೇ ಪ್ರಶ್ನಿಸಿಕೊಂಡಳು. ಮತ್ತೆ ಆತ ಬಡಿದಾಗ, ಬೆಲ್ಟ್ ಬಿಚ್ಚಿದ್ದ, ಬೆಲ್ಟಿನ ಬಕಲ್ ಮೂಗಿಗೆ ಬಡಿದು, ಮೂಗಿನ ಮೂಳೆ ಮುರಿದಿತ್ತು. ಮದುವೆ ಇವೆಲ್ಲವನ್ನು ಒಳಗೊಂಡಿರುತ್ತದೆ ಎಂದು ಯಾರೂ ಆಕೆಗೆ ತಿಳಿಸಿರಲಿಲ್ಲ.

ವಿವಾಹದ ಎರಡನೇ ತಿಂಗಳಿಗೇ, ಬಸಿರು. ಕೆಲವೇ ತಿಂಗಳಲ್ಲಿ ಆಕೆ ಹೆಂಡತಿ–ತಾಯಿ, ಹೊಡೆತ-ಬಡಿತ, ಸಣ್ಣ ಶಾಂತ ವಾತಾವರಣದಿಂದ–ಬಾಂಬೆಯ ಜನ ಗದ್ದಲಕ್ಕೆ. ಇದೀಗ ಬೆಳಗಿನ ವಾಂತಿ–ದೇಹದ ಮೇಲುಳಿದ ಕಲೆಗಳು–ಮುರಿದ ಮೂಳೆಗಳು. ಪೂರಾ ಪೂರಾ ಛಿದ್ರಸಾದಳು. 'ನನಗೆ ಮಕ್ಕಳು ಇಷ್ಟ. ನಮ್ಮಪ್ಪನಿಗೆ ಡಜನ್ ಹುಟ್ಟಿದವು. ನಾನೂ ಅರ್ಧ ಡಜನ್ ಆದರೂ ಹುಟ್ಟಿಸುತ್ತೇನೆ' ಅಂದಿದ್ದ ಆತ. ಆತನಿಗೆ ತಾನು ತನ್ನದೇ ಪರಿಶ್ರಮದಿಂದ ಇಂದು ಇಂಥ ಪ್ರತಿಷ್ಠಿತ ಸ್ಥಾನ ತಲುಪಿದ್ದೇನೆ ಎಂಬ ಹೆಮ್ಮೆ ಇತ್ತು. ಉಳಿದವರೆಲ್ಲ ಆರಾಮಾಗಿ ಬೆಳೆದವರೆಂಬ ಆಕ್ರೋಶ ಕೂಡ ಇತ್ತು.

ಹಿಂಸೆಗೆ ನೂರು ಮುಖಗಳಿದ್ದವು, ಕಾರಣಗಳಿರಲಿಲ್ಲ. ನೀ ಬುದ್ಧಿ ಇಲ್ಲದವಳು, ಯಾತಕ್ಕೂ ಬಾರದವಳು. ನನಗೆ ಇನ್ನೂ ಚಂದದ ಹುಡುಗಿಯರು ಸಿಗ್ತಾ ಇದ್ರು, ಕೈತುಂಬಾ ವರದಕ್ಷಿಣೆ ಕೊಡೋ ಸಂಬಂಧಗಳಿದ್ದವು' ಎಂದ. 'ನಿನಗೆ ಕೊಬ್ಬು ಜಾಸ್ತಿ' ಅನ್ನುತ್ತಿದ್ದ. 'ನಿನ್ನ ಬಟ್ಟೆ ಬರೆಗೆ ನಾ ದುಡ್ಡು ಕೊಡಲಾರೆ' ನಿನ್ನ ಔಷಧಿಗೂ....' ಹೆದರಿಸುತ್ತಿದ್ದ. ಹೀಗಿದ್ದೂ ಹೊರಗೆ ಸಮಾಜದಲ್ಲಿ ಆತ ಪ್ರತಿಷ್ಠಿತ ವ್ಯಕ್ತಿಯಾಗಿದ್ದ. 'ಸೀರೆ ಉಟ್ಟು ಮೈ ತುಂಬಾ ಸೆರಗು ಹೊದ್ದು ತಲೆ ಮುಚ್ಚಿಕೋ' ಪಾರ್ಟಿಗೆ ಹೊರಟಾಗ ಹೇಳುತ್ತಿದ್ದ. ಬೆಳಗ್ಗೆ ಹೊಡಿಸಿಕೊಂಡು ಸಂಜೆ ರೇಷ್ಮೆ ಸೀರೆ ಉಟ್ಟು ನಗುವಿನ ಮುಖವಾಡ ಧರಿಸಿ ಪಾರ್ಟಿಗಳಿಗೆ ಹೋಗಿ ಬರುತ್ತಿದ್ದಳು. ಮನೆಯ ಆ ದಿನದ ಖರ್ಚಿಗೊಂದಿಷ್ಟು ಹಣ ಕೊಡುತ್ತಿದ್ದ, ಅದರ ಪ್ರತಿ ಪೈಸೆಗೆ ಲೆಕ್ಕ ಒಪ್ಪಿಸಬೇಕಿತ್ತು. ಒಂದು ರೂಪಾಯಿ ತಪ್ಪಿದರೂ ಹೊಡೆತ ತಪ್ಪಿದ್ದಲ್ಲ. ಕಡೆಗೆ ಆವನ ಸಿಟ್ಟಿಗೆ ಹೊಡೆತಕ್ಕೆ ಯಾವುದೇ ಕಾರಣ ಬೇಕಿರಲಿಲ್ಲ. ಕುಳಿತದ್ದಕ್ಕೆ ನಿಂತದ್ದಕ್ಕೆ ತಪ್ಪು ಹುಡುಕಿ ಬಡಿಯುತ್ತಿದ್ದ. ಫ್ಲೇವಿಯಾ ಸುಳ್ಳು ಹೇಳುತ್ತಲೇ ಹೋದಳು. ತನ್ನ ಹಿಂಸೆಯ ವೈವಾಹಿಕ ಜೀವನವನ್ನು ಹೇರಿಕೊಂಡ ಒಡವೆಗಳಲ್ಲಿ, ಉಟ್ಟ ರೇಶ್ಮೆ ಸೀರೆಯಲ್ಲಿ ಮುಚ್ಚುತ್ತಾ 'ಸುಖೀ ಸಂಸಾರ'ದ ಪ್ರತಿಮೆ ನಿಲ್ಲಿಸಿದಳು. ಅತ್ಯಂತ ದುಃಖದ ವಿಚಾರ ಎಂದರೆ ವೈವಾಹಿಕ ದೌರ್ಜನ್ಯಗಳು, ಮನೆತನ ಗೌರವ ಎಂಬ ಪದಗಳಿಗೆ ಜೋತು ಬಿದ್ದು ವರದಿಯಾಗದೆ ಉಳಿಯುತ್ತವೆ. ಅನಿವಾರ್ಯವೆಂಬಂತೆ ಅನುಭವಿಸುವವರು ಜೀವನವಿಡೀ ಬಡಿಸಿಕೊಂಡು ಬದುಕುತ್ತಾರೆ. ಅಸಾಧ್ಯವೆನಿಸಿದಾಗ ಸಾಯುತ್ತಾರೆ. ಇಂಥ ಹಿಂಸೆಯ ಸಂಬಂಧವ ಬಯಲಿಗಿಟ್ಟು, ಓದು–ಕೆಲಸವಿಲ್ಲದಿದ್ದರೂ ಹೊರಬಂದು ತಮ್ಮ ಕಾಲ ಮೇಲೆ ನಿಂತವರು ಅಪರೂಪ. ಇಂಥ ಅಪರೂಪದವ್ಯಕ್ತಿ ಫ್ಲೇವಿಯಾ. ಆಕೆಯ ಈ ಹೆಜ್ಜೆ ತಟ್ಟನೆ ಒಂದೇ ದಿನ ಹೊರಗೆ ನಡೆದ ಸಾಹಸ ಗಾಥೆಯಾಗಿಲ್ಲ. ನೋವಿನ 15 ವರ್ಷಗಳ, ತೆವಳಿದ ಹೆಜ್ಜೆ.

ಮೊದಲನೆಯ ಮಗು ಗಂಡಾಗಿತ್ತು. ತೌರಿಗೆ ಹೋದಾಗ ತಾಯಿಗೆ ಸುಳಿವು ಸಿಕ್ಕಿತು. 'ಮದುವೆ ಅಂದರೆ ಇದೆಲ್ಲಾ ಇದ್ದದ್ದೇ. ಹೊಂದಿಕೋ, ವಿಧೇಯಳಾಗಿರು,

ಪ್ರಶ್ನೆ ಮಾಡಬೇಡ' ಎಂಬ ಉಪದೇಶಗಳೊಂದಿಗೆ ಮತ್ತೆ ಗಂಡನ ಮನೆಗೆ ರವಾನೆ. ಎರಡನೆಯದು–ಮೂರನೆಯದು, ಹೆಣ್ಣುಮಕ್ಕಳಾದರು. ನಾಲ್ಕು–ಐದು ಎಂದು ಸರಣಿ ಬೆಳೆಯುತ್ತಿತ್ತು. ಪುಣ್ಯಕ್ಕೆ ಗರ್ಭಪಾತ ಕಾನೂನು ರೀತ್ಯಾ ಮಾನ್ಯವಾಗಿದ್ದು, ಸಾರ್ವಜನಿಕ ಆಸ್ಪತ್ರೆಯಲ್ಲಿ ಪುಕ್ಕಟ್ಟೆಯಾಗಿ ಮುಗಿಯಿತು. ಆಕೆ ಪೂರ್ಣ ಛಿದ್ರವಾಗಿದ್ದಳು. ಸಾಯುವ ಯೋಚನೆ ಬಂದದ್ದು ಎಷ್ಟು ಭಾರಿಯೋ. ಆದರೆ ಮೂರು ಮಕ್ಕಳ ಕ್ರೂರಿ ಗಂಡನ ಕೈಗಿಟ್ಟು ಕಣ್ಮುಚ್ಚುವುದು ಅಸಾಧ್ಯವಿತ್ತು. ಇದ್ದಬದ್ದ ಎಲ್ಲರ ಸಲಹೆಗೆ ಕಿವಿ ಕೊಟ್ಟದ್ದಾಯ್ತು. 'ವಾದ ಮಾಡಬೇಡ, ಜಗಳ ಆಡಬೇಡ, ಅವನಿಗೆ ಕೋಪ ಬರಿಸಬೇಡ....' ಯಾವ ಸಲಹೆಗೂ ಹಿಂಸೆಯ ತಡೆಹಿಡಿವ ಶಕ್ತಿ ಇರಲಿಲ್ಲ. 'ಯಾವಾಗ ಏನು ಬೇಕಾದರೂ ಈ ಮನೆಯಲ್ಲಿ ಆಗಿಬಿಡಬಹುದು' ಎಂಬ ಚಿಂತೆ ವಿಪರೀತ ಭೀತಿ ಹುಟ್ಟಿಸುತ್ತಿತ್ತು. ಮಕ್ಕಳೂ ಈಗ ಕಣ್ಣುಮುಚ್ಚಾಲೆ ಕಲಿಯುತ್ತಿದ್ದರು. ಫ್ಲೇವಿಯಾಳ ಕೈ ಪ್ಲಾಸ್ಟರಿನಲ್ಲಿದ್ದಾಗ, 'ಅಮ್ಮ, ಅಪ್ಪ ಹೊಡೆದದ್ದ ಯಾರಿಗೂ ಹೇಳಬೇಡ' ಅಂದಿದ್ದ 5 ವರ್ಷದ ಮಗ ! 'ಬಾತ್‌ರೂಮಿನಲ್ಲಿ ಜಾರಿಬಿದ್ದೆ....' ಇತ್ಯಾದಿ ಸಬೂಬುಗಳ ಮೇಲೆ ಮತ್ತಷ್ಟು ವರ್ಷ ಕಳೆದವು. ಒಂದು ಚಮಚ ತನ್ನ ಜಾಗದಲ್ಲಿಲ್ಲದಿದ್ದರೆ, ಮಗು ನೀರುಚೆಲ್ಲಿದರೆ, ಒಂದು ಮಾತು ಹೆಚ್ಚುಆಡಿದರೆ, ಇಲ್ಲ ಸುಮ್ಮನೇ ಇದ್ದರೆ- ಹೊಡೆತ. ನೆಪಗಳಷ್ಟೆ ಇದ್ದವು ಹೊಡೆತಕ್ಕೆ, ಕಾರಣಗಳಲ್ಲ. ಆತ ಹೊರಗೆ ಪ್ರತಿಷ್ಠಿತ ವ್ಯಕ್ತಿ. ಕಂಪನಿ ಸೆಕ್ರೆಟರಿ. ಶ್ರೀಮಂತ ಬಡಾವಣೆಯಲ್ಲಿ ಎರಡು ಬೆಡ್–ರೂಮಿನ ಫ್ಲಾಟ್.... ಆತ ಹೀಗೆ ಅನಾಗರೀಕವಾಗಿ ವರ್ತಿಸುತ್ತಾನೆ ಎಂದರೆ ಯಾರೂ ನಂಬುತ್ತಿರಲಿಲ್ಲವೇನೋ ಪ್ರತಿ ಬಾರಿ ಬಡಿದಾಗ 'ಸಾರಿ, ಮತ್ತೆ ಹಾಗೆ ಮಾಡೋಲ್ಲ' ಎಂದು ರಾತ್ರಿ ಹಾಸಿಗೆಯಲ್ಲಿ ಮುಗಿದದ್ದುಂಟು. ಒಂದಿಷ್ಟು ಮೃದುವಾದ ಕ್ಷಣಗಳೂ ಇದ್ದವು. ಆದರೆ ಮರುದಿನಕ್ಕಾಗಲೆ ಆ ಮಾತಿಗೆ–ಭರವಸೆಗೆ ಅರ್ಥ ಇರುತ್ತಿರಲಿಲ್ಲ.

ಕೆಲವು ಬಾರಿ ವಿಪರೀತದ ಜಗಳ, ಹೊಡೆತದ ನಂತರ ಮನೆ ಬಿಟ್ಟು ಸಂಬಂಧಿಗಳ ಬಳಿ ಉಳಿದದ್ದುಂಟು. ಮತ್ತೆ ಮಕ್ಕಳ ಮುಖ ನೆನಪಿಗಾಗಿ ಹಿಂತಿರುಗಿದ್ದು. ಕೆಲವೊಮ್ಮೆ ಮೂರು ಮಕ್ಕಳ ಕರಕೊಂಡು ಮನೆಬಿಟ್ಟದ್ದುಂಟು. ಆದರೆ ಮೂರು ಮಕ್ಕಳೊಂದಿಗೆ, ನೆಂಟರ ಬಳಿ ಎಷ್ಟು ದಿನ ಇರಲು ಸಾಧ್ಯ ? ಮತ್ತೆ ಹಿಂತಿರುಗಿದ್ದಾಯ್ತು. ಸ್ನೇಹಿತರು, ನೆಂಟರು ಬುದ್ಧಿ ಹೇಳಲು ಬಂದರೆ, ಒರಟಾಗಿ ಅವರೊಡನೆ ಸಂಬಂಧ ಕಡಿದುಕೊಳ್ಳುತ್ತಿದ್ದ. ಆಕೆಗಿದ್ದ ಕೆಲವೇ ಸ್ನೇಹಿತರು ಕಳೆದುಹೋದರು. ಹೊಸ ಸ್ನೇಹಗಳ ಮಾಡುವ ಧೈರ್ಯ ಇರಲಿಲ್ಲ.

ಇಂಥ ವಾತಾವರಣದಲ್ಲಿ ಆಕೆಯ ಸ್ವತಂತ್ರ ಬದುಕಿನ ಅನ್ವೇಷಣೆ, ತನ್ನದೊಂದು ವ್ಯಕ್ತಿತ್ವದ ಹುಡುಕಾಟ ಆರಂಭವಾಯ್ತು. ಅತ್ಯಂತನೋವಿನ, ನಿಧಾನದಪ್ರತಿಕ್ರಿಯೆ ಅದು. ಬ್ಯಾಂಕ್ ಒಂದರ ಪರೀಕ್ಷೆ ಬರೆದು ಪಾಸಾದಳು. 'ನನ್ನ ಹೆಂಡತೀನ ಕೆಲಸಕ್ಕೆ ಕಳಿಸೊಲ್ಲ' ಎಂದು ಕೂಗಾಡಿದಾಗ, ಸಂದರ್ಶನಕ್ಕೆ ಹೋಗಲಾಗಲಿಲ್ಲ. ಒಮ್ಮೆ ಪೋಲೀಸರಿಗೆ ದೂರು ಕೊಟ್ಟದ್ದೂ ಆಗಿತ್ತು, ತೀವ್ರ ಮೂಳೆ ಮುರಿತದ ನಂತರ 'ಆತ ವಿದ್ಯಾವಂತ. ಏನು ಮಾಡೋಕ್ಕೂ ಬರೋಲ್ಲ. ನಿಮಗೆ ಬೇಕಾದರೆ ರಿಮ್ಯಾಂಡ್ ಹೋಂ ನೋಡ್ತೇನೆ' ಅಂದರು. ಅಲ್ಲಿಗೆ ಪೋಲೀಸರ ಹುಸಿ ರಕ್ಷಣೆಯ ಭ್ರಮೆಯೂ ಕಳೆಯಿತು.

1977ರಲ್ಲಿ ಹೀಗೊಂದು ಘಟನೆ ನಡೆಯಿತು. ಮಗ ಚಪ್ಪಲಿ ಕಳಕೊಂಡು ಬಂದ ಎಂಬ ಕಾರಣಕ್ಕೆ, ಮೂರೂ ಮಕ್ಕಳ ಹೊರಗೆ ಊಟವಿಲ್ಲದೆ ನಿಲ್ಲಿಸಿದ. ತಾಳಲಾರದೆ ಆಕೆ ಬಾಗಿಲು ತೆರೆದು ಮಕ್ಕಳ ಒಳಬಿಟ್ಟಾಗ, ಕೈಗೆ ಸಿಕ್ಕ ಸೌಟು ತೆಗೆದುಕೊಂಡು ಬಡಿದ. ಆಕೆ ಮೂರ್ಛೆ ಹೋದಳು. ಆತ ಬಕೆಟ್ ನೀರು ತಂದು ಸುರಿದ ಎಚ್ಚರ ಬಂದಾಗ ಆಕೆಗೂ ಕೋಪ ಉಕ್ಕಿತ್ತು, ಒದ್ದೆ ಸೀರೆ ಕಿತ್ತೊಗೆದು, ತಟ್ಟನೆ ಏನೋ ತೋರಿ ಅಡಿಗೆ ಮನೆಗೆ ನುಗ್ಗಿ ಮೆಣಸಿನ ಪುಡಿ ತಂದು ಅವನ ಕಣ್ಣಿಗೆ ತೂರಿದಳು. ಒಂದಿಷ್ಟು ಮಕ್ಕಳ ಕಣ್ಣಿಗೂ ಬಿತ್ತು. ಅವ ಉದ್ರಿಕ್ತ ಗೂಳಿಯಂತೆ ನುಗ್ಗಿ ಬಂದ. ಆಕೆ ಒದ್ದೆ ಒಳಲಂಗ, ರವಿಕೆಯಲ್ಲೇ ಬೆದರಿ ಹೊರಗೋಡಿದಳು. ಮಕ್ಕಳು ಕಣ್ಣು ಉಜ್ಜುತ್ತಾ ಅಳುತ್ತಿದ್ದವು. ಭಾನುವಾರದ ಮಧ್ಯಾಹ್ನದ ಶಾಂತತೆ ಕದಡಿತ್ತು. ಆದರೂ, ಯಾರೊಬ್ಬರೂ ಬಾಗಿಲು ತೆಗೆಯಲಿಲ್ಲ, ಹೊರಬರಲಿಲ್ಲ. ನಂತರ ಸುತ್ತಮುತ್ತಲಿನ ಜನ ಕೊಟ್ಟ ಉತ್ತರ 'ಅದು ಕೌಟುಂಬಿಕ ಜಗಳ, ನಾವು ತಲೆ ಹಾಕೋದು ಸರಿ ಇರೋಲ್ಲ'. ಇದು ನಮ್ಮ ಸಮಾಜದ ನಿಲುವು. ಹೆಂಡತಿಯ ಕೊಲೆ ಆದರೂ ಅದು 'ಗಂಡ-ಹೆಂಡತಿ ಜಗಳ' ವಯಕ್ತಿಕ ವಿಷಯ ಎಂದು ಮುಖ ತಿರುಗಿಸುವುದು.

ಅಲ್ಲಿಗೆ ಆ ಸಂಸಾರ ಸಾಕಾಯಿತು. ಫ್ಲೇವಿಯಾ ಮಕ್ಕಳೊಂದಿಗೆ ಕಸಿನ್ ಮನೆ ಸೇರಿ, ಜೀವನಾಂಶಕ್ಕೆ ದಾವಾ

ಹಾಕಿಬಿಟ್ಟಿದ್ದಾಯ್ತು. ಆತ ಅದಕ್ಕೆ ಪ್ರತಿಕ್ರಿಯೆಯಾಗಿ ವೈವಾಹಿಕ ಜೀವನದ ಹಕ್ಕುಗಳ ಬೇಡಿ, ಮೊಕದ್ದಮೆ ಹೂಡಿದ. ಒಂದಷ್ಟು ದಿನ ಕಳೆಯಿತು. ಕೇಸು ಎಷ್ಟು ದಿನ ಎಳೆವುದೋ, ಅಲ್ಲಿಯವರೆಗೂ ತಡಕೊಳ್ಳಲು ಹಣವಿಲ್ಲ. ಜೀವನಾಂಶ ಸಿಕ್ಕರೂ ಸಾಕಾಗುವುದೇ, ಮೂರುಮಕ್ಕಳ ಭವಿಷ್ಯ – ನೂರೆಂದು ಪ್ರಶ್ನೆಗಳಿಗೆ ಉತ್ತರವಿಲ್ಲದೆ ಆರ್ಥಿಕ ಸ್ವಾವಲಂಬನೆ ಇಲ್ಲದೆ, ಮತ್ತೆ ಗಂಡನ ಮನೆಗೆ ಹಿಂತಿರುಗಬೇಕಾಯ್ತು.

ಆದರೆ ಈ ಬಾರಿ ಹಿಂತಿರುಗಿದಾಗ, ನಿರ್ಧಾರವಿತ್ತು. ಸ್ವತಂತ್ರಳಾಗುವ, ಸ್ವಾವಲಂಬಿಯಾಗುವ, ಈ ಬಂಧನದಲ್ಲಿಯೇ ಉಳಿದು ರೆಕ್ಕೆ ಪುಕ್ಕ ಬೆಳೆಸಿಕೊಂಡು ಅದರಾಚೆ ಹಾರುವ ಗಟ್ಟಿ ನಿರ್ಧಾರ. ಮಕ್ಕಳಿಗೆ ಮನೆಪಾಠ ಹೇಳಿ ಸಂಪಾದನೆ ಆರಂಭವಾಯಿತು. ಅವರಿವರ ಪರಿಚಯವಲ್ಲ, ಅವಳಂತಹದೇ ಅನೇಕ ಕತೆಗಳು ಹೊರಬಿದ್ದವು. ಆಕೆ ಒಂಟಿ ಅಪವಾದವಾಗಿರಲಿಲ್ಲ. ಈ ಮಧ್ಯೆ 'ಮಹಿಳಾಸಂಘ'ವೊಂದರ ಪರಿಚಯವಾಯಿತು. 30 ಮಂದಿ ಮಹಿಳೆಯರಿದ್ದರು. ಫ್ಲೇವಿಯಾ ಈ ಸಮೂಹಕ್ಕೆ ಸೇರಿ ಅವರ ಹೋರಾಟಕ್ಕೆ ಸ್ಪರ್ಧೆಯಾದಳು. 'ಮಹಿಳಾ ಆತ್ಮ ಸುರಕ್ಷಾ ಸಂಘ' ಬಾಂಬೆಯಲ್ಲಿ ಸ್ಥಾಪಿತವಾಯಿತು. ವೈವಾಹಿಕ ಹಿಂಸೆಯಲ್ಲಿಯ ಅನೇಕ ಮಿಥ್ಯೆಗಳ ಹೊಂಗೆಳೆಯಲು ತನ್ನ ಆತ್ಮಚರಿತ್ರೆ 'ನನ್ನ ಕತೆ....ನಮ್ಮ ಕತೆ' ಬರೆದಳು ತನ್ನ ನೋವಿನ ಅನುಭವಗಳ ಅಪರಿಚಿತ ಮಹಿಳೆಯರಲ್ಲಿ ಹಂಚಿಕೊಂಡು ಆತ್ಮೀಯಳಾದಳು. ಬರೆಯುತ್ತಾ ತಾ ಚೆನ್ನಾಗಿ ಬರೆಯಬಲ್ಲೆ ಎಂಬ ಆತ್ಮವಿಶ್ವಾಸ ಮೂಡಿತು. ತಾ ಸಾಂಪ್ರದಾಯಿಕ ಮಹಿಳೆಯ ಮಾದರಿಯಾಚೆ ಹೆಜ್ಜೆ ಇಟ್ಟಿದ್ದರೂ, ಜನಕ್ಕೆ ತಲುಪಿದ್ದಳು-ಬಹಳಷ್ಟು ಸಹ ಯಾತ್ರಿಗಳಿದ್ದರು. 'ಫ್ಲೇವಿಯಾ ನಮ್ಮ ಅಮ್ಮಂಗ ಹೀಗೇ ಆಗಿತ್ತು....' 'ನನ್ನ ಅಕ್ಕಂಗೆ....' ಅನೇಕ ಕೇಸುಗಳು ಎದುರು ಬಂದವು. ಸಂಶೋಧನಾ ಸಂಸ್ಥೆಯಲ್ಲಿದ್ದ ಗೆಳತಿ. ಆಕೆಗೊಂದು ಪ್ರಾಜೆಕ್ಟ್ ಕೊಟ್ಟಳು. ಬಾಂಬೆಯಲ್ಲಿ ಗಂಡನಿಂದ ಹೊಡೆತ ತಿಂದ ಮಹಿಳೆಯರನ್ನು ಸಂದರ್ಶಿಸಿ, ಸಂಶೋಧಿಸುವುದು ಲಾಯರ್‌ಗಳನ್ನು, ಪೋಲೀಸು ಅಧಿಕಾರಿಗಳನ್ನು, ಸಮಾಜ ಸೇವಕರನ್ನೂ ಸಂಪರ್ಕಿಸಿ ಸಮಸ್ಯೆಯ ಪೂರ್ಣ ವಿವರಗಳ ಹೊರತರುವುದು. ಇಂಥ ಮಹಿಳೆಯರ ಭೇಟಿಯಾಗಿ ನೋವು ಹಂಚಿಕೊಳುವುದು ಕಷ್ಟವಾಗಲಿಲ್ಲ. ಸಮಾಜದ ಹೆಂಡತಿ ಬಡಿವ ಪರಂಪರೆಯ ಬಗ್ಗೆ ಇರುವ ತಪ್ಪು ತಿಳುವಳಿಕೆಗಳ ಫ್ಲೇವಿಯಾ ಹೀಗೆ ಪಟ್ಟಿ ಮಾಡಿದ್ದಾಳೆ–

'ವಿದ್ಯಾವಂತ ಗಂಡಸು ಹೆಂಡತಿಯನ್ನು ಎಂದೂ ಹೊಡೆಯುವುದಿಲ್ಲ' 'ಅದು ಬರೀ ಕೊಳಚೆ ಪ್ರದೇಶಗಳಲ್ಲಿ ನಡೆಯೋದು' 'ಅವ ಕುಡುಕ ಇರಬೇಕು' 'ನೀನೆಲ್ಲೋ ಅವನಿಗೆ ಕೋಪ ಬರಿಸಿದ್ದೀಯಾ' 'ಆತ ಕೆಲಸದಲ್ಲಿ ಫಸ್ಟ್ರೇಟ್ ಆಗಿರಬೇಕು' 'ಆತ ಮಾನಸಿಕ ರೋಗಿ ಇರಬೇಕು' 'ಆಕೆ ಅವನನ್ನೂ ಬಟ್ಟಿಲ್ಲ ಎಂದರೆ, ಆಕೆಗೆ ಅದಲ್ಲ ಅಭ್ಯಾಸವಾಗಿರಬೇಕು'.

ತನ್ನ ಆತ್ಮಕಥೆಯಲ್ಲಿ ಇಂಥಾ ಒಂದೊಂದೇ ಪೊಳ್ಳು ಕಲ್ಪನೆಯ ತೊಡೆದು ಹಾಕಿದ್ದಾಳೆ ಫ್ಲೇವಿಯಾ. ಆಕೆ ಬೇರೆ ಹೆಸರಿಟ್ಟುಕೊಂಡು ಬರೆದ ಅನೇಕ ಲೇಖನಗಳು ಪ್ರಕಟವಾದವು. ಆತ್ಮವಿಶ್ವಾಸ ಹೆಚ್ಚಿತು. ಹೊಸ ಹಾದಿಗಳು ಕಂಡವು. 1980ರಲ್ಲಿ ರಾಷ್ಟ್ರೀಯ ಸಮ್ಮೇಳನದಲ್ಲಿ 'Prespectives for the Women's Liberation Movement in India' ಪ್ರಬಂಧ ಮಂಡಿಸಿದಳು.

1990 ರಲ್ಲಿ ಆಕೆಗೆ ಕೊಳಚೆ ಪ್ರದೇಶದ ಸಮುದಾಯ ಆರೋಗ್ಯ ಸಮಾಜ ಸೇವಕಿಯಾಗಿ ಸಣ್ಣ ಕೆಲಸ ದೊರೆಯಿತು ಅದೊಂದು ದೊಡ್ಡ ಸಾಧನೆ ಆಕೆಗೆ. ಇದೀಗ ಗಂಡನ ಬದಲಿಕೆಗೆ ಹೆದರದ ಕೆಲಸಕ್ಕೆ ಸೇರಿದ್ದಾಯ್ತು. ಆಕೆಯ ಪ್ರಾಜೆಕ್ಟ್‌ನ ವಿಷಯ ತಿಳಿದೊಡನೆ, ಆತ ಆ ಸಂಶೋಧನೆಯ ಅಷ್ಟೂ ಹಾಳೆಗಳ ಹುಡುಕಿ ಹರಿದು ಹಾಕಿದ. ಬದುಕಿನ ದೊಡ್ಡ ಕೆಲಸ ಚಿಂದಿಯಾಗಿತ್ತು. ಮತ್ತೆ ಮನೆಯಾಚೆಗೆ ಹೆಜ್ಜೆ ಇಟ್ಟಳು.

ಫ್ಲೇವಿಯಾ SSLC ಮಾತ್ರ ಓದಿದ್ದಳು. ಇದೀಗ ತೆರೆದ ವಿಶ್ವವಿದ್ಯಾಲಯದಲ್ಲಿ ಸೇರಿ, ಡಿಸ್ಟಿಂಕ್ಷನ್‌ನಲ್ಲಿ ಪಾಸಾದಳು. ಕೆನಡಾದ ಮಾಂಟ್ರೀಲ್‌ನ ಅಂತರ್‌ರಾಷ್ಟ್ರೀಯ ಸಮ್ಮೇಳನದಲ್ಲಿ ಪ್ರಬಂಧ ಮಂಡಿಸಲು ಆಹ್ವಾನ ಬಂದಿತು. ಪ್ರವಾಸ ಯಶಸ್ವಿಯಾಯಿತು. 'Our Fight against wife-beating in Bombay' ಆಕೆಯ ಪ್ರಬಂಧಕ್ಕೆ ಅಚ್ಚರಿ ಕಾದಿತ್ತು. ಅಲ್ಲಿ ಫ್ಲೇವಿಯಾ ಒಬ್ಬಳೇ ಆಗಿರಲಿಲ್ಲ ಗಂಡನಿಂದ ಬಡಿಸಿಕೊಂಡ ಮಹಿಳೆ !

ಇದು ಫ್ಲೇವಿಯಾಳ ಕತೆ.

ಆದರೂ ಆಶಾಕಿರಣವಿದೆ, ವಾತಾವರಣ ಸುಧಾರಿಸಿದೆ. ಸ್ತ್ರೀಯರ ಸಮಸ್ಯೆಗಳ ಬಗ್ಗೆ ಹೆಚ್ಚು ಜಾಗೃತಿ ಮೂಡಿದೆ. 'ನನ್ನ ವಯಕ್ತಿಕ ನೋವು, ವಯಕ್ತಿಕ ಹೋರಾಟ ಈ ಸಾಮಾಜಿಕ ಬದಲಾವಣೆಗೆ ಕಿಂಚಿತ್ ಸಹಾಯವಾದರೆ, ಈ ಹೋರಾಟ ಸಾರ್ಥಕ' ಎನ್ನುತ್ತಾಳೆ ಫ್ಲೇವಿಯಾ. ಇದೊಂದು ಸಾರ್ಥಕ ಹೋರಾಟ ಎಂದು ಒಪ್ಪದೆ ಇರಲು ಸಾಧ್ಯವೆ ?

21ನೇ ಪುಟದಿಂದ

ಗಳೂ ಮೂರು ಬಗೆಯ ಲೈಂಗಿಕ ದೃಷ್ಟಿಕೋಣದವರು, ಬೇರೆ ಬೇರೆ ತಲೆಮಾರಿನವರು. ಒಬ್ಬರು ಇನ್ನೊಬ್ಬರಿಗಿಂತ "ಮುಂದುವರಿದವರು". ತಂದೆ–ಮಕ್ಕಳ ಸಂಬಂಧ ಸಹ ಮೂರನೆಯ ತಲೆಮಾರಿನ ಜೇನ್ಸ್ಯಾಗೆ ಲೈಂಗಿಕ ಆಸಕ್ತಿ ಮತ್ತು ತೃಪ್ತಿಗೆ ಅಡ್ಡಿ ಬರುವುದಿಲ್ಲ. ಅವಳ ಹಿಂದಿನ ತಲೆ ಮಾರಿನ ಓಲ್ಗಾಗೆ ಸ್ವಚ್ಛಂದ ಲೈಂಗಿಕತೆಗೆ ಆಕ್ಷೇಪವಿಲ್ಲ, ಆದರೆ ಅವಳು ಕಂಡುಕೊಂಡ ಸತ್ಯವೆಂದರೆ ಮಾನವ ಹೃದಯವು ಬಹಳ ಸಂಕ್ಲಿಷ್ಟವಾದುದು, ಎಂದು. ಅವಳ ಪ್ರೇಮ ಭಂಗವಾದಾಗ ಅವಳು ಅಸ್ತವ್ಯಸ್ತಗೊಳ್ಳುತ್ತಾಳೆ. ಜೇನ್ಯಾ ಆದರೋ ಭಂಗವನ್ನು ಅನುಭವಿಸುವಂತೆಯೇ ಇಲ್ಲ; ಏಕೆಂದರೆ, ಅವಳ ಭಾವಕೋಶದಲ್ಲಿ ಪ್ರೇಮವೆಂಬ ವಸ್ತುವೇ ಅರ್ಥರಹಿತವಾದದ್ದು. ಓಲ್ಗಾಳ ಹಿಂದಿನ ತಲೆ ಮಾರಿನ ಮರಿಯಾಗೆ ಪ್ರೇಮ ಪುರಸ್ಸರವಾದ ಮತ್ತು ಸಾಕಷ್ಟು ರಹಸ್ಯವಾದ ವಿವಾಹೇತರ ಸಂಬಂಧ ವರ್ಜ್ಯವಲ್ಲ; ಆದರೆ ಅಂತಸ್ತಿಗೆ ತಕ್ಕುದಾದ ಪ್ರೇಮ ವ್ಯವಹಾರ ಮಾತ್ರ ಅಂಗೀಕಾರಾರ್ಹವಾದದ್ದು. ಒಟ್ಟಿನಲ್ಲಿ, ದಾಂಪತ್ಯ ಎಂಬ ಕೌಟುಂಬಿಕ ವ್ಯವಸ್ಥೆಗೆ ಮೀರಿ ನಿಲ್ಲುವ ಒಂದು ಸ್ತ್ರೀ–ಪುರುಷರ ಸಂಬಂಧಗಳ ಚೌಕಟ್ಟಿನಲ್ಲಿ ಮಾತ್ರವೇ ಮಹಿಳೆಗೆ ಯಥಾವತ್ತಾದ ಸ್ವಾತಂತ್ರ್ಯ ಸಾಧ್ಯವೆಂದು ಕತೆ ಪ್ರತಿಪಾದಿಸುತ್ತದೆ. ಅದು ಸರಿಯಾದ ಮಾತು, ಎಂದು ಹೈದರಾಬಾದ್ ಸ್ತ್ರೀತ್ವವಾದಿಗಳ ತೀರ್ಮಾನ. ಅದನ್ನೊಪ್ಪಬೇಕೆ, ಮತ್ತು ಇಂದಿನ ಸಾಮಾಜಿಕ ಪರಿಸ್ಥಿತಿಯು ಅಂತಹ ಹಂತವನ್ನು ಮುಟ್ಟಿದೆಯೇ ಎಂಬ ಪ್ರಶ್ನೆಗಳು ನಮ್ಮ ಎದುರಾಗಿವೆ. ಅರಾಜಕತೆಯತ್ತ ಹೋಗದೆ ಸ್ವಾತಂತ್ರ್ಯ ಗಳಿಸುವುದು ಮತ್ತು ವರ್ಗಾಧಾರಿತ ತಿಳುವಳಿಕೆ,—ಇವು ಬಹುಶಃ ಪ್ರಸ್ತುತ ಪ್ರಶ್ನೆಗಳಿಗೆ ಸೂಕ್ತವಾದ ಉತ್ತರ ಕೊಡಬಲ್ಲವು. ರಂಗನಾಯಕಮ್ಮನವರ ಪುಸ್ತಕ ಈ ದೃಷ್ಟಿಯಿಂದ ಒಂದು ಸ್ವಾಗತಾರ್ಹವಾದ ಪುಸ್ತಕವಾಗಿದೆ. ●

(ಪುಸ್ತಕದ ಪ್ರಕಾಶಕರು : ಅರುಣಾ ಪಬ್ಲಿಷಿಂಗ್ ಹೌಸ್, ವಿಜಯವಾಡ; ಪುಟಗಳು 208; ಪ್ರಕಟಣೆ : ಸೆಪ್ಟೆಂಬರ್ 1989; ಬೆಲೆ : 12 ರೂಪಾಯಿ).

---

Reg. No. MAG (5) PRB. DECL 039/86-87
BOOK-POST/PERIODICALS

To,

If undelivered please return to :
Jagruthi Mahila Adhyayana Kendra
26, 1st Main Road, Vyalikaval
Bangalore-560 003